# ಕರ್ನಾಟಕ ಲೋಚನ

ಸಂಪುಟ ೭ | ಜೂನ್ ೧೯೯೪ | ಸಂಚಿಕೆ ೧





ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ

ಬೆಂಗಳೂರು-೫೬೦ ೦೧೯

# ' ಕರ್ನಾಟಕ ಲೋಚನ '



**ಲೇಖನಗಳು – ಟಿಪ್ಪಣಿಗಳು**

ಸಂಶೋಧನಾತ್ಮಕ ಪಾಂಡಿತ್ಯ, ವಿದ್ವತ್ಪೂರ್ಣ ಲೇಖನಗಳು ಹಾಗೂ ಹೊಸದಾಗಿ ಪ್ರಕಟವಾಗುವ ಉತ್ತಮ ಮಟ್ಟದ ಸಂಪಾದಿತ ಗ್ರಂಥಗಳು ಮತ್ತು ಶಾಸ್ತ್ರಸಾಹಿತ್ಯದ ಗ್ರಂಥಗಳು–ಇವುಗಳ ಮೇಲಣ ವಿಮರ್ಶೆಗಳು, ವಿದ್ವದ್ವಿಚಾರ ಮತ್ತು ವಿದ್ವತ್ ಪ್ರಪಂಚದ ವಿದ್ಯಮಾನ ಇವುಗಳಿಗೆ ಸಂಬಂಧಿಸಿದ ಟೀಕೆ–ಟಿಪ್ಪಣಿಗಳು–ಇವುಗಳಿಗೆ **'ಲೋಚನ'** ಮೀಸಲಾಗಿದೆ.

ಯಾವುದೇ ಲೇಖನದಲ್ಲಿ ಮತ್ತು ಟಿಪ್ಪಣಿಗಳಲ್ಲಿ ವ್ಯಕ್ತಪಡಿಸಿರುವ ಅಭಿಪ್ರಾಯಗಳಿಗೆ ಆಯಾ ಲೇಖಕರೇ ಜವಾಬ್ದಾರರು; ಅವು ಅವಶ್ಯವಾಗಿ ಪ್ರತಿಷ್ಠಾನದ ಪರವಾಗಿ ವ್ಯಕ್ತಪಡಿಸಿದ ಅಭಿಪ್ರಾಯಗಳು ಎಂದು ತಿಳಿಯತಕ್ಕದ್ದಲ್ಲ.

**ಲೇಖನಗಳಿಗೆ ಆಹ್ವಾನ**

ಮೇಲ್ಕಂಡ ವಾಕ್ಯವೃಂದದಲ್ಲಿ ವ್ಯಕ್ತಪಟ್ಟಿರುವ ಆಶಯಕ್ಕೆ ಅನುಗುಣವಾಗಿ ಲೇಖನಗಳನ್ನು ವಿದ್ವಾಂಸರೂ ಭಾಷೆ ಸಾಹಿತ್ಯಗಳ ಪ್ರೌಢ ವಿದ್ಯಾರ್ಥಿಗಳೂ ಕಳಿಸಿಕೊಡಬೇಕೆಂದು ವಿನಂತಿ. 'ಲೋಚನ'ದ ಗಾತ್ರ ಪರಿಮಿತವಾದದ್ದರಿಂದ ಲೇಖನಗಳು ಅಚ್ಚಿನ 6–8 ಪುಟಗಳ ಪರಿಮಿತಿಯಲ್ಲಿ ಇದ್ದರೆ ಅನುಕೂಲ. ಲೇಖನಗಳು ಹಾಳೆಯ ಒಂದೇ ಪಕ್ಕದಲ್ಲಿ ಸ್ಫುಟವಾದ ಅಕ್ಷರಗಳಲ್ಲಿ ಬರೆದಿರಬೇಕು. ಅಡಿ ಟಿಪ್ಪಣಿಗಳನ್ನು ಪುಟದ ಅಡಿಯಲ್ಲಿಯೇ ಕಾಣಿಸುವುದು ಒಳಿತು. ಗ್ರಂಥ-ಲೇಖನಾಧಾರ ವಿವರಗಳನ್ನು (Bibliography) ಲೇಖನದ ಕಡೆಯಲ್ಲಿ ಕೊಡಬಹುದು. ಲೇಖನವನ್ನು ಹಿಂದಿರುಗಿಸಲಾಗದ್ದರಿಂದ ಲೇಖಕರು ತಮ್ಮ ಲೇಖನದ ಒಂದು ಪ್ರತಿಯನ್ನು ಉಳಿಸಿಕೊಂಡಿರಬೇಕಾಗಿ ಕೋರಿಕೆ.

# ಕರ್ನಾಟಕ ಲೋಚನ

**ಷಾಣ್ಮಾಸಿಕ ವಿದ್ವತ್ ಪತ್ರಿಕೆ**

ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ

54, 3ನೇ ಕ್ರಾಸ್, ಗವೀಪುರ ವಿಸ್ತರಣ, ಬೆಂಗಳೂರು–560 019

ಸಂಪಾದಕರು : **ವಿದ್ವಾನ್ ಟಿ. ಕೇಶವ ಭಟ್**

ಸಹಾಯಕ ಸಂಪಾದಕರು : **ಎನ್. ಎಸ್. ರಾಮಸ್ವಾಮಿ ಅಯ್ಯರ್**

ಸಂಪುಟ ೭ ಜೂನ್ ೧೯೯೪ ಸಂಚಿಕೆ ೧

## ಪರಿವಿಡಿ

# Karnataka Lochana

Half-Yearly Journal, Published by B.M. Sri Memorial
Foundation, 54, 3rd Cross, Gavipura Extension
Bangalore-560 019


Vol. VII June 1994 No. 1

CONTENTS

## ಸಮಸ್ಯಾ ಪೂರಣ

ಕಳೆದ ಸಂಚಿಕೆಯಲ್ಲಿ ನೀಡಲಾದ ಸಮಸ್ಯೆ :

"ತರುಣೀಜನ ಮೊಲಿಯದಿರ್ದೊಡೇಂ ಶೋಕಿಪೆಯೋ ?"

1 ಕವಿತಾ ಭಾಮಿನಿ ಕರುಣಿಸಿ
ನಿನ್ನಯ ಕವಿತೆಗಳ ಕೇಳ್ದ ಸಹೃದಯರೊಲಿಯಲ್
ಯಶ ದಶದಿಶೆಯೊಳ್ ಪಸರಲ್
ತರುಣೀ ಜನಮೊಲಿಯದಿರ್ದೊಡೇಂ ಶೋಕಿಪೆಯೋ ?
(ಎಸ್. ಜಿ. ನರಸಿಂಹಾಚಾರ್ಯರ ಕವಿತೆ– ಪ್ರೇಮಿಕ ಪ್ರಿಯರ ಸಮಾಗಮ)

—ಪ್ರೊ॥ ಗರ್ಗೇಶ್ವರಿ ವೆಂಕಟಸುಬ್ಬಯ್ಯ

2 ಸುರಸತಿಯು ಪ್ರೋಲ್ವ ಸೊಬಗಿಂ
ಸುರೇಂದ್ರನ ಸತಿಗೆಣೆಯೆನಿಸಿದ ಸುಶೀಲತೆಯಿಂ
ಮೆರೆವ ಸತಿಯೊಲಿದಿರಲಿತರ
ತರುಣೀ ಜನಮೊಲಿಯ ದಿರ್ದೊಡೇಂ ಶೋಕಿಪೆಯೋ

—ಡಾ॥ ಲಕ್ಷ್ಮೀನಾರಾಯಣ

3 ವರಗುಣವೆ ವಿಭೂಷಣಮಾ
ಸುರುಚಿಕರಂ ಭಾಷಣಂ ದಯಾಪೂರ್ಣಂ ಸಾ
ಕ್ಷರಮಲ್ಲದ ಮಿಕ್ಕೆಲ್ಲಾ
ತರುಣೀಜನಮೊಲಿಯದಿರ್ದೊಡೇಂ ಶೋಕಿಪೆಯೋ

—ಯು. ಎಸ್. ಶ್ರೀಧರ ಆರಾಧ್ಯ

4 ಧರಣೀರಮಣಿಯ ನಲ್ನಗೆ
ಸರಣಿಯ ಕೋಲ್ಮಿಂಚು ಸಂಚಳಿಪುದೆನೆ ಸುಮನೋ
ಹರ ಕಾವ್ಯರಸಮೆಸೆದಿರಲ್
ತರುಣೀಜನ ಮೊಲಿಯದಿರ್ದೊಡೇಂ ಶೋಕಿಪೆಯೋ

—ಸಮೇತನಹಳ್ಳಿ ರಾಮರಾಯ

5 ಕರಚರಣಂಗಳ ಲಾಸ್ಯಂ
ಕೊರಳುಲಿ ಕೂಜನವದೇಂ ಬಡನಡುವ ಬಳುಕೇಂ
ಪರಿತಾಪಕ್ಕಾಗರ ಮೀ
ತರುಣೀಜನ ಮೊಲಿಯ ದಿರ್ದೊಡೇಂ ಶೋಕಿಪೆಯೋ

—ಮಾ. ವೆಂ. ಶ್ರೀನಾಥ

6 ಪಿರಿಯರ ದೇವರ ಸದ್ಗುರು
ವರರೊಲವನುರಕ್ತಿ ಸತಿ ವಿಧೇಯ ಸುತರ್ ಮಿ
ತ್ರರ ನೆರವಿರೆ ಪುರವೀಥಿಯ
ತರುಣೀ ಜನವೊಲಿಯದಿರ್ದೊಡೇಂ ಶೋಕಿಪೆಯೋ

—ಟಿ. ಕೇಶವ ಭಟ್ಟ

7 ಪರರಂ ಪಳಿಯಲ್ ಮೂಗಂ
ಪರನಿಂದೆಯ ಕೇಳೆ ಕಿವುಡನಾ ಕುರುಡಂ ಹಾ !
ಪರಸತಿಯ ಬಯಸಿ ನೋಡಲ್
ತರುಣೀಜನವೊಲಿಯದಿರ್ದೊಡೇಂ ಶೋಕಿಪೆಯೋ ||

—ದರ್ಭೆ ನಾರಾಯಣ ಭಟ್ಟ

8 ನರಿಸೊರದ ಬಟ್ಟ ಮೂಗಿನ
ಕರಕರೆ, ಬಟ್ಟಿತ್ತು ಪಚ್ಚೆ, ಪೊಲ್ಲನಡತೆಯಾ
ಪರಮಪದ ಮಾರ್ಗಮರಿಯದ
ತರುಣೀಜನ ಮೊಲಿಯದಿರ್ದೊಡೇಂ ಶೋಕಿಪೆಯೋ ?

—ವಿದ್ವಾನ್ ತಾಳ್ತಜೆಕೃಷ್ಣ ಭಟ್ಟ

9 ತರುಣ ಜನಕೆ ಆನಂದಮಾಗಿರ್ದೊಡೆ
ಧರಣಿ ಕಳಚಿ ಬೀಳ್ವುದೇನ್ ಕೆಳಗೆ ?
ಭರಣಿ ತುಂಬಿದಂತಿರಲ್ವಿಚಾರಗಳು ನಿನ್ನೊಳಗೆ
"ತರುಣೀಜನ ಮೊಲಿಯದಿರ್ದೊಡೇಂ ಶೋಕಿಪೆಯೋ" ?

—ಸದ್ಯೋಜಾತ ಮೂರ್ತಿ, ಎಂ.ಎ., ರಾ.ಭಾ.ವಿ.

10 ತರುಣೀ ಜನದೊಲುಮೆಯು ದೇ
ನರರನ್ನೀಲೋಕಬಂಧನಕ್ಕೊಡರಿಸುಗುಂ
ಪರಮಾತ್ಮನನೊಲಿಸುವೊಡೀ
ತರುಣೀಜನವೊಲಿಯದಿರ್ದೊಡೇಂ ಶೋಕಿಪೆಯೋ

—ಡಾ|| ಯು. ರಾಮಭಟ್

11 ವರಗುಣ ಸಂಪದ್ಭರಿತನೆ
ನಿರುಪಮ ದೈವದ ಕೃಪೆಯೊಳಗಿರ್ಪಾ ನಿನ್ನಂ
ಸರಸತಿವೆಣ್ ತಾನೊಲಿದಿರೆ
ತರುಣೀ ಜನವೊಲಿಯದಿರ್ದೊಡೇಂ ಶೋಕಿಪೆಯೋ

—ಬಿ. ಎಸ್. ಸಣ್ಣಯ್ಯ

**ಮುಂದಿನ ಸಂಚಿಕೆಗಾಗಿ ಸಮಸ್ಯೆ :**

"ದನವಂ ಸಂಗೀತದಿಂದೆ ಸಲೆ ರಂಜಿಸಿದಂ"

ಸೂಚಿಸಿದವರು ಟಿ. ಕೇಶವಭಟ್ಟ:

# ವಿವೇಕ ಚಿಂತಾಮಣಿ :
## —ಒಂದು ಅಧ್ಯಯನ

—ಎಸ್. ಜಗನ್ನಾಥ

ವಿವೇಕ ಚಿಂತಾವ.ಣಿ, ನಿಜಗುಣಶಿವಯೋಗಿಗಳು ಬರೆದ ವಿಶ್ವಕೋಶವೆಂದು ಪ್ರಸಿದ್ಧವಾಗಿದೆಯಷ್ಟೆ. ಸ್ವತಃ ಗ್ರಂಥದ ಪ್ರಾರಂಭದಲ್ಲಿ ಬರುವ "ವಿಶ್ವ ವಿಷಯಂಗಳ" ಎಂಬ ಶಬ್ದ ಈ ದೃಷ್ಟಿಯಿಂದ ವಿಚಾರಾರ್ಹವಾಗಿದೆ. "ವಿಶ್ವ"ವೆಂದರೆ ಪ್ರಪಂಚ, ಸಕಲ, ಶುಂಠಿ ಎಂದೂ (ವೈಜಯಂತೀ ಕೋಶ 6.5.78) ಅಖಂಡವಾದದ್ದು, ಸಮವಾದದ್ದು ಎಂದೂ, (ಅದೇ 5–4–86) ಬ್ರಹ್ಮಾಂಡ, ಸರ್ವವ್ಯಾಪಕ ವಿಷ್ಣು, ವಿಷ್ಣುದೇವತೆಗಳು (ಬಹುವಚನದಲ್ಲಿ) ಎಂದೂ (Apte's Sanskrit-English Dictionery Vol. III. Page 1474) ಅರ್ಥಗಳಿವೆ. "ವಿಷಯ"ವೆಂಬ ಶಬ್ದಕ್ಕೆ ಇಂದ್ರಿಯಗೋಚರ ಪದಾರ್ಥ, ಇಂದ್ರಿಯತೃಪ್ತಿ, ಲೌಕಿಕ ವಸ್ತು, ಗುರಿಯಿಟ್ಟ (ತಲುಪಬೇಕೆಂದು ಅಂದುಕೊಂಡಿರುವ) ಸಾಧನೆ, ತಿಳಿಯ ಬೇಕಾದ ವಿಚಾರ, ತಲುಪಲು ಸಾಧ್ಯವಾಗುವ ಸ್ಥಳ, ನಿರ್ದಿಷ್ಟವಾದ ಖಾತೆ (portfolio or Department) ಶಾಸ್ತ್ರದ ಉದ್ದಿಷ್ಟಾರ್ಥ, ಜಾಗ, ರಾಷ್ಟ್ರ, ಆಸರೆ ನೀಡುವ ಸ್ಥಳ (=Resort place), ಧಾರ್ಮಿಕಚಿಂತನೆ, ಐದು ಎಂಬ ಸಂಖ್ಯೆಯ ಸೂಚಕವಾದ ನಾಮಪದ, ಪ್ರಿಯಕರ, ಪತಿ, ವೀರ್ಯ, ಗಂಡಸುತನ ಎಂಬ ಅರ್ಥಗಳಿವೆ. (ಅದೇ Vol III p. 1478) ಸಾಹಿತ್ಯಿಕ ವಸ್ತು (=plot) ಅನ್ನುವ ಅರ್ಥ ಈ ಕೋಶದಲ್ಲಿ ಬಿಟ್ಟುಹೋಗಿದೆ. ವಿಶೇಷ ಅಥವಾ ಉದ್ದೇಶ, ಪ್ರಯೋಜನ ಎಂಬ ಅರ್ಥಗಳಲ್ಲಿ ಕೂಡಾ ಇದು ಬಳಕೆಯಲ್ಲಿದೆ. ("ಏನು ವಿಷಯ" ಎಂಬ ಆಡುಬಳಕೆಯ ಮಾತಿನಲ್ಲಿ.)

ಇಷ್ಟು ಅರ್ಥಗಳಲ್ಲಿ ವಿಶ್ವವೆಂಬ ಶಬ್ದಕ್ಕೆ ಸಮಸ್ತ ಎಂದೂ ವಿಷಯವೆಂಬ ಶಬ್ದಕ್ಕೆ ತಿಳಿಯಬೇಕಾದ ವಿಚಾರ ಅಥವಾ ಸಾಹಿತ್ಯಿಕ/ಶಾಸ್ತ್ರೀಯ ವಸ್ತು (plot) ಎಂದೂ ಅರ್ಥ ಮಾಡಿದರೆ ಮಾತ್ರ ವಿ.ಚಿಂ.ಯ ರಚನೆಗೆ ಗ್ರಂಥಕರ್ತೃ ಮನಸ್ಸಿನಲ್ಲಿಟ್ಟುಕೊಂಡಿದ್ದ ತಾತ್ಪರ್ಯವೇನೆಂದು ತಿಳಿಯುತ್ತದೆ. ಈ ಮಾತಿಗೆ ಉಪಷ್ಟಂಭಕವಾಗಿ "ವೇದಪುರಾಣಶಾಸ್ತ್ರದೊಳ್ ನೇಮಿಸಿತೋರ್ಪ" ಎಂಬ ವಿಶೇಷಣ ರೂಪವಾದ ಖಂಡವಾಕ್ಯ (=phase) ಗ್ರಂಥದ ಆದಿಯಲ್ಲಿನ ಉತ್ಪಲಮಾಲಾ ಛಂದಸ್ಸಿನ ಪದ್ಯದಲ್ಲಿ ಬಂದಿರುವುದರಿಂದ ಗ್ರಂಥಕರ್ತೃವಿನ ಮನಸ್ಸಿನಲ್ಲಿ ಏನಿದ್ದಿತು ಎಂಬುದು ಸ್ಪಷ್ಟವಾಗಿದೆ.

ಮತ್ತೊಂದು ಊಹೆಯನ್ನೂ ಇಲ್ಲಿ ಮಾಡಬಹುದು. ದೇವತೆಗಳ ಸಮೂಹಾತ್ಮಕವಾದ "ವಿಶ್ವೇ"ದೇವತೆಗಳೆಂಬವರು, ಒಟ್ಟು ಹತ್ತು. ವೇದದಲ್ಲಿ ಅವರ ಹೆಸರುಗಳು ಹೀಗಿವೆ: 1. ಸೋಮ. 2. ಅಗ್ನಿ. 3. ತ್ವಷ್ಟೃ. 4. ಇಂದ್ರ. 5. ರುದ್ರ. 6. ಪೂಷನ್. 7. ವಿಷ್ಣು. 8. ಅಶ್ವಿನೀದೇವತೆಗಳು. 9. ಮಿತ್ರಾವರುಣ. 10. ಅಂಗಿರಸ್. (A. A. Mackdonall. A. Vedic Reader for students p. 148)- ಮಹಾಭಾರತದಲ್ಲಿ (3.261.6) ಈ ಹೆಸರುಗಳು ಬೇರೆಯಾಗಿವೆ: 1. ವಸು 2. ಸತ್ಯ 3. ಕ್ರತು 4. ದಕ್ಷ 5. ಕಾಲ 6. ಕಾಮ 7. ಧೃತಿ 8. ಕುರು 9. ಪುರೂರವಸ್ 10. ಮಾದ್ರವ. (ಉದ್ಧೃತ, Apte's Sanskrit English Dictionary Vol. III p. 1474) ವಿ. ಚಿಂ.ಯಲ್ಲಿ ಇರುವ ಪರಿಚ್ಛೇದಗಳೂ ಒಟ್ಟು ಹತ್ತು. ಆದ್ದರಿಂದ ಹತ್ತು ಮುಖ್ಯ ವರ್ಗಗಳಲ್ಲಿ ವಿಷಯವಿಭಾಗವಿದೆ ಎಂಬ ಸಂಗತಿಯನ್ನು ವಿಮರ್ಶಿಸಿದರೂ ಸಹ "ವಿಶ್ವ ವಿಷಯಂಗಳ" ಎಂಬ ಮಾತಿಗೆ ಸಾರ್ಥಕ್ಯ ಬಂದೇ ಬರುತ್ತದೆ. ಸಂಖ್ಯೆಯನ್ನು ನೇರವಾಗಿ ಉಲ್ಲೇಖಿಸುವುದರ ಬದಲಿಗೆ ಸೂಚಕಶಬ್ದಗಳನ್ನು ಬಳಸುವ ರೂಢಿಯನ್ನು ಇಲ್ಲಿ ಪರಿಪಾಲಿಸಿದೆ.

ಇನ್ನೂ ವಿಶ್ವದಲ್ಲಿನ ವಿಚಾರಗಳೆಲ್ಲವನ್ನೂ ಒಳಗೊಂಡಿರುವುದು ಎಂಬ ಅರ್ಥ ಅತ್ಯಂತ ಸಾಧಾರಣವಾಗಿ, ಯಾರಿಗೆ ಬೇಕಾದರೂ ಹೊಳೆಯುವಂತಹದು. ಅದರ ಬಗೆಗೆ ಲಂಬಿಸುವುದು ಅಗತ್ಯವಿಲ್ಲ.

ವಿಶ್ವದ ಸ್ವರೂಪವೆಂಥದ್ದೆಂಬುದರ ಬಗೆಗೆ (ಬ್ರಹ್ಮಾಂಡ, ಸೃಷ್ಟಿ ಪ್ರಳಯ, ಭೂಲೋಕ ವರ್ಣನೆ–ದೇವಲೋಕ ಪಾತಾಳ ಇತ್ಯಾದಿ ವಿಭಿನ್ನ ಲೋಕಗಳ ಸ್ವರೂಪ ವಿಚಾರ) ವಿ.ಚಿಂ.ಯ ಸುಮಾರು ಅರ್ಧದಷ್ಟು ಜಾಗ ಮೀಸಲಾಗಿರುವುದನ್ನು ಲೆಕ್ಕಕ್ಕೆ ತೆಗೆದುಕೊಂಡರೂ, ವಿಶ್ವಕೋಶವೆಂಬ ಶಬ್ದಕ್ಕೆ ಈಗ ಚಾಲ್ತಿಯಲ್ಲಿರುವ ಅರ್ಥದ ವ್ಯಾಪ್ತಿ, ಗ್ರಂಥಕರ್ತೃವಿನ ಹೃದಯದಲ್ಲಿ ಮೂಡಿತ್ತೆನ್ನುವ ವಿಷಯದಲ್ಲಿ ಯಾವ ಸಂಶಯವೂ ಬರುವುದಿಲ್ಲ. ಇಂಥ ಗ್ರಂಥ ರಚನೆ ಮಾಡಲು ಪ್ರೇರಣೆ ಗ್ರಂಥಕರ್ತೃವಿಗೆ ಬಂದದ್ದು ಹೇಗೆ ಎಂಬ ಪ್ರಶ್ನೆಗೆ ಅದೇ ಪ್ರಾರಂಭದ ಪದ್ಯದಲ್ಲಿ "ಅನೇಕಲೋಕಹಿತಮಾಗಿರೆ" (=ನಾನಾ ಜನ ವಿದ್ಯಾಜಿಜ್ಞಾಸುಗಳಿಗೆ ಉಪಕಾರವಾಗಲೆಂದು) ಎಂದು ಬಂದಿರುವ ಭಾಗ ಉತ್ತರ ನೀಡುತ್ತದೆ.

ಇಲ್ಲೊಂದು ಸ್ವಾರಸ್ಯವಿದೆ. ಸಂಸ್ಕೃತದಲ್ಲಿ "ಶಿವತತ್ತ್ವ ರತ್ನಾಕರ" ಗ್ರಂಥವನ್ನು ವಿಶ್ವಕೋಶ ಸ್ವರೂಪದಲ್ಲಿ ಬರೆದ ಕೆಳದಿ ಬಸವಪ್ಪನಾಯಕನು ಕೂಡ, ತನ್ನ ಗ್ರಂಥವನ್ನು "ಲೋಕ (=ಜನ)ದ ಹಿತ"ಕ್ಕಾಗಿ ಬರೆದಿದ್ದೇನೆಂದು ಹೇಳಿಕೊಳ್ಳುವುದು. (ಲೋಕಾನಾಂ ತು ಹಿತಾಯ ಸಾರಕೆಳದೀ ಸಿಂಹಾಸನಾಧೀಶ್ವರೋ....ಇತ್ಯಾದಿ. ಶಿವತತ್ತ್ವ ರತ್ನಾಕರ. ಪ್ರಾ.ವಿ.ಸಂ. ಸಂಸ್ಕರಣ ಪುಟ 14. 18ನೇ ಪದ್ಯ.) ಅಷ್ಟೇಕೆ,

ಶೈವತತ್ತ್ವಗಳ ವಿಶ್ವಕೋಶದಂತಿರುವ ರಚನೆಯೆನ್ನು "ಶಿವತತ್ತ್ವ ಚಿಂತಾಮಣಿ" ಎಂಬ ಹೆಸರಿನಲ್ಲಿ ಮಾಡಿರುವ ಲಕ್ಕಣದಂಡೇಶನೂ "ಜಗಕೆ ಹಿತವ ಮಾಳ್ಪಡೆ ನೋಡಿ" (54.56) ಎಂದು ಬರೆದಿದ್ದಾನೆ. Great men think alike ಎಂಬ ಆಂಗ್ಲ ಸೂಕ್ತಿಗೆ ಇವೆಲ್ಲಾ ನಿದರ್ಶನಗಳಷ್ಟೆ.

ಶಿವತತ್ತ್ವ ರತ್ನಾಕರದಲ್ಲಿ ಇಂಥ ಗ್ರಂಥರಚನೆಯ ಪ್ರೇರಣೆಯೆನ್ನು ಕುರಿತು ಹೇಳುವಾಗ ಇನ್ನಷ್ಟು ವಿವರವಿದೆ. ರಾಜನೀತಿ ಬೇಕೆನ್ನುವವರು ರಾಜನೀತಿಯನ್ನೂ ವಿನೋದ (=amusement) ಬೇಕೆನ್ನುವವರು ವಿನೋದವನ್ನೂ (ಕಲೆಗಳನ್ನೂ) ತಾಂತ್ರಿಕರು ತಂತ್ರವನ್ನೂ ಭೋಗಾಪೇಕ್ಷಿಗಳು ಭೋಗವಿಚಾರವನ್ನೂ ಮೋಕ್ಷಾರ್ಥಿಗಳು ಮೋಕ್ಷದ ಸಂಗತಿಯನ್ನೂ ತಿಳಿದುಕೊಳ್ಳಲೆಂಬ ಉದಾರವಾದ ದೃಷ್ಟಿಯಿಂದ ಉದಾರ ರೀತಿಯಲ್ಲಿ (=ಯಾವ ವಿಚಾರಕ್ಕೂ ಅತ್ಯಂತ ಪಕ್ಷಪಾತ ತೋರಿಸದಂತೆ) ಈ ಗ್ರಂಥವನ್ನೀಗ ಪ್ರಾರಂಭಿಸಲಾಗಿದೆ. (ಶಿ.ತ.ರ. ಪುಟ 13, 12ನೇ ಪದ್ಯ) ವಿ.ಚಿಂ.ಯಲ್ಲಿ ಉಪಸಂಹಾರ ಪದ್ಯದಲ್ಲಿನ "ಸಂಶಯಸ್ತೋಮವಡಂಗಿ", "ಬೇರೆ ಬಹುಶಾಸ್ತ್ರವನೋದುವ ಬಾಧೆ ಪಿಂಗಿ" ಎನ್ನುವ ಭಾಗದಲ್ಲಿ ಪ್ರೇರಣೆಯ ಸೂಚನೆ ಸ್ಪಷ್ಟವಾಗಿದೆ.

ರಾಜಸೋಮೇಶ್ವರ ಸಂಸ್ಕೃತ ಭಾಷೆಯಲ್ಲಿ ತಾನು ಬರೆದ (ರಾಜ)ಮಾನಸೋಲ್ಲಾಸ ಅಥವಾ ಅಭಿಲಷಿತಾರ್ಥ ಚಿಂತಾಮಣಿಯಲ್ಲಿ (ಪ್ರಾ.ವಿ. ಸಂಸ್ಕರಣ ಪುಟ 2.) ತನ್ನ ಗ್ರಂಥವು "ಎಲ್ಲಾ ವಿಚಾರಗಳನ್ನೂ ತಿಳಿಸುವ ಹಾಗೂ (ವಿದ್ಯೆಯ) ಜಗತ್ತಿಗೆಲ್ಲ ಗುರುವಾಗಿರುವ ಪುಸ್ತಕ" ಎಂದು ತನ್ನ ಗ್ರಂಥವನ್ನು ವಿಶೇಷಿಸಿಕೊಂಡಿದ್ದಾನೆ. (ಶಿಕ್ಷಕಂ ಸರ್ವವಸ್ತೂನಾಂ ಜಗದಾಚಾರ್ಯ ಪುಸ್ತಕಮ್) ಇಂತಹ ವಿಶೇಷಣವನ್ನೇನೂ ವಿ.ಚಿಂ.ಯ ಕರ್ತೃವು ನೀಡಿಲ್ಲವಾದರೂ "ವಿವೇಕ ಚಿಂತಾಮಣಿ"—ಎಂಬ ಹೆಸರಿಟ್ಟಿರುವುದರಿಂದಲೇ ಅಂಥ ವಿಶೇಷಣ ನೀಡಿದರೆ ಸೂಚಿತವಾಗುವ ಅಭಿಪ್ರಾಯ ಸ್ಪಷ್ಟಪಡುತ್ತದೆಂದು ಗ್ರಂಥಕರ್ತೃವಿನ ಹೃದಯವಿರಬಹುದು. ಚಿಂತಾಮಣಿಯೆಂದರೆ ನಮ್ಮ ಮನಸ್ಸಿನಲ್ಲಿರುವ ಎಲ್ಲ ಅಭಿಲಾಷೆಗಳನ್ನೂ ಪೂರೈಸುವ ಶಕ್ತಿಯುಳ್ಳ ಒಂದು ತರದ ದಿವ್ಯಮಣಿಯಂತೆ. ವಿದ್ಯಾವಂತರ ವಿದ್ಯಾಸಂಬಂಧದ ಸಮಸ್ತ ಕುತೂಹಲಗಳನ್ನು ತಣಿಸುವ ವಿವೇಕ "ಚಿಂತಾಮಣಿ"-ಯಿದು ಎಂಬುದು ನಿಜಗುಣ ಶಿವಯೋಗಿಗಳ ಅಂತರಂಗ. ಲಕ್ಕಣದಂಡೇಶ ಬರೆದ ಗ್ರಂಥವೂ "ಶಿವತತ್ತ್ವ ಚಿಂತಾಮಣಿ"ಯಷ್ಟೆ. ಸಂಸ್ಕೃತದಲ್ಲಿ ಚಿಂತಾಮಣಿ ಎಂಬ ಹೆಸರಿನ ಹಲವಾರು ಗ್ರಂಥಗಳಿವೆ. ಭಾಟ್ಟಚಿಂತಾಮಣಿ (ಗಾಗಾಭಟ್ಟ-ಮೀಮಾಂಸಾ) ತತ್ತ್ವಚಿಂತಾಮಣಿ (ಗಂಗೇಶೋಪಾಧ್ಯಾಯ-ನ್ಯಾಯಶಾಸ್ತ್ರ) ಅದ್ವೈತ ಚಿಂತಾಮಣಿ (ರಂಗೋಜಿಭಟ್ಟ-ಅದ್ವೈತ) ಸಿದ್ಧಾಂತ ಚಿಂತಾಮಣಿ (ಶ್ರೀನಿವಾಸಾಚಾರ್ಯ-ವಿಶಿಷ್ಟಾದ್ವೈತ) ಅಧಿಕರಣ ಚಿಂತಾಮಣಿ (ಬ್ರಹ್ಮಸೂತ್ರಭಾಷ್ಯ ವ್ಯಾಖ್ಯಾನ-ವರದನಾಥಸೂರಿ-ವಿಶಿಷ್ಟಾದ್ವೈತ)

ಸ್ತವ ಚಿಂತಾಮಣಿ (ಭಟ್ಟ ನಾರಾಯಣ–ಪ್ರತ್ಯಭಿಜ್ಞಾ ದರ್ಶನ) ವೀರಶೈವ ಚಿಂತಾಮಣಿ [ನಂಜಣಾಚಾರ್ಯ–ವೀರಶೈವ) ಷಟ್‌ಚಕ್ರ ಚಿಂತಾಮಣಿ ಹಾಗೂ ತತ್ತ್ವ ಚಿಂತಾಮಣಿ (ಪೂರ್ಣಾನಂದ ಪರಮಹಂಸ–ತಂತ್ರ) ಅಭಿಧಾನ ಚಿಂತಾಮಣಿ (ಹೇಮಚಂದ್ರ-ನಿಘಂಟು) ಶಬ್ದಾರ್ಥ ಚಿಂತಾಮಣಿ [ಸುಖಾನಂದನಾಥ ನಿಘಂಟು) ಸರ್ವಾರ್ಥ ಚಿಂತಾಮಣಿ (ವೆಂಕಟೇಶ–ಜ್ಯೋತಿಷ) ವೈದ್ಯಚಿಂತಾಮಣಿ (ಇಂದ್ರಕಂಠ ವಲ್ಲಭ–ಆಯುರ್ವೇದ) ಯೋಗ ಚಿಂತಾಮಣಿ (ಶಂಕರಾನಂದ ಸರಸ್ವತಿ–ಯೋಗ) ಇದರಿಂದ ಹೊರಡುವ ತಾತ್ಪರ್ಯವೇನೆಂದರೆ–ಗ್ರಂಥಗಳಿಗೆ ಚಿಂತಾಮಣಿ ಎಂಬ ಹೆಸರನ್ನಿಡುವುದು ಅನೇಕ ಶತಮಾನಗಳ ಹಿಂದಿನಿಂದ ರೂಢಿಯಲ್ಲಿತ್ತು. ಆ ರೂಢಿ ವಿವೇಕ ಚಿಂತಾಮಣಿ ಎಂಬ ಹೆಸರಿನಲ್ಲಿ ಮತ್ತೊಮ್ಮೆ ಪ್ರತಿಧ್ವನಿಸಿದೆಯಷ್ಟೆ.

ಇನ್ನು ವಿವೇಕವೆಂದರೇನು ? ಬೇರ್ಪಡಿಸುವಿಕೆ, ಚಿಂತನೆ, ನೀರಿನ ದೋಣಿ (!) ಎಂಬ ಮೂರು ಅರ್ಥಗಳನ್ನು ಈ ಶಬ್ದಕ್ಕೆ ಮೇದಿನೀಕೋಶ (1–159) ಕೊಡುತ್ತದೆ. ಒಳ್ಳೆಯದನ್ನು ಕೆಟ್ಟದ್ದರಿಂದ, ಒಂದು ವಸ್ತು ಮತ್ತೊಂದು ವಸ್ತುವಿನಿಂದ ಬೇರೆ ಎಂದು-ಬೇರ್ಪಡಿಸಿ ತಿಳಿದುಕೊಳ್ಳುವುದೇ ವಿವೇಕ. ನಿತ್ಯವಸ್ತು ಯಾವುದು ಅನಿತ್ಯವಸ್ತು ಯಾವುದೆಂಬ ವೈಚಾರಿಕ ವಿಶ್ಲೇಷಣೆಯನ್ನು ವಿವೇಕವೆಂಬ ಹೆಸರಿನಿಂದ ವೇದಾಂತ ಗ್ರಂಥಗಳಲ್ಲಿ ಕರೆದಿರುತ್ತದೆ. ಈ ನಿತ್ಯಾನಿತ್ಯವಸ್ತು ವಿವೇಕದ ಪ್ರಸ್ತಾಪ ವಿ. ಚಿಂ. ಯಲ್ಲಿ ಕೂಡಾ ಬರುತ್ತದೆ. [ಪುಟ 14] ವೇದಾಂತದ ವಿಚಾರಕ್ಕೆ ಬಹಳಷ್ಟು ಮಹತ್ವ ನೀಡಿರುವ ವಿ. ಚಿಂ. ಯ ಕರ್ತೃ ತನ್ನಗ್ರಂಥಕ್ಕೆ–ಈ ಎಲ್ಲ ಕಾರಣಗಳಿಂದಾಗಿ **'ವಿವೇಕ' ಚಿಂತಾಮಣಿ** ಎಂಬ ಹೆಸರನ್ನಿಟ್ಟಿರುವುದರಲ್ಲಿ ಆಶ್ಚರ್ಯವೇನೂ ಇರಬೇಕಾಗಿಲ್ಲ.

ಅನೇಕ ಶಾಸ್ತ್ರಗ್ರಂಥಗಳನ್ನು ನೋಡಿ ಅವುಗಳ ಆಧಾರದಿಂದ ಪುಸ್ತಕವನ್ನು ರಚಿಸಿದ್ದೇನೆಂದು ಹೇಳಿಕೊಳ್ಳುವುದು ಪ್ರಾಚೀನ ಗ್ರಂಥಕರ್ತರುಗಳಲ್ಲಿ ಸಾಧಾರಣವಾಗಿ ಕಂಡುಬರುತ್ತದೆ. ಉದಾಹರಣೆಗೆ, ಸುಪ್ರಸಿದ್ಧ ಕೋಶಗ್ರಂಥವಾದ ಅಮರಸಿಂಹ ಪ್ರಣೀತ ನಾಮಲಿಂಗಾನುಶಾಸನ ಅಥವಾ ಅಮರಕೋಶದಲ್ಲಿ "ಸಮಾಹೃತ್ಯಾನ್ಯ ತಂತ್ರಾಣಿ" (= ಬೇರೆ ಕೋಶಗ್ರಂಥಗಳಿಂದ ಮಾಹಿತಿಗಳನ್ನು ಕಲೆಹಾಕಿಕೊಂಡು) ಎಂಬ ಮಾತು ಎರಡನೆಯ ಶ್ಲೋಕದಲ್ಲೇ ಬರುತ್ತದೆ. ಅಷ್ಟಾಧ್ಯಾಯಿಯ ಸಮಗ್ರ ವ್ಯಾಖ್ಯಾನವಾದ 'ಕಾಶಿಕಾ'ದ ಮೊದಲನೆಯ ಪೀಠಿಕಾಪದ್ಯವೇ ಹೀಗಿದೆ :

ವೃತ್ತೌ ಭಾಷ್ಯೇ ತಥಾ ಧಾತುನಾಮ ಪಾರಾಯಣಾದಿಷು ।
ವಿಪ್ರಕೀರ್ಣಸ್ಯ ತಂತ್ರಸ್ಯ ಕ್ರಿಯತೇ ಸಾರಸಂಗ್ರಹಃ ॥

(= ಕುಣಿ ಮುಂತಾದವರು ಬರೆದ ವೃತ್ತಿಗ್ರಂಥ, ಪತಂಜಲಿ ಮುಂತಾದವರ ಭಾಷ್ಯಗ್ರಂಥ, ಧಾತುಪಾರಾಯಣ–ನಾಮಪಾರಾಯಣ ಮುಂತಾದ ಗ್ರಂಥಗಳಲ್ಲಿ ಚೆದರಿ ಹೋಗಿರುವ ಶಾಸ್ತ್ರ ವಿಚಾರಗಳನ್ನಿಲ್ಲಿ ಒಟ್ಟುಗೂಡಿಸಿ ಕೊಡಲಾಗುತ್ತದೆ.)

ಶಿವತತ್ತ್ವ ರತ್ನಾಕರದಲ್ಲಿ ಪ್ರತಿಯೊಂದು ಕಲ್ಲೋಲದ ಕೊನೆಯಲ್ಲೂ ಆಯಾ ಕಲ್ಲೋಲದ ವಿಷಯ ಸಂಗ್ರಹಮಾಡಲು ಯಾವ ಗ್ರಂಥಗಳ ಆಧಾರವನ್ನು ಗ್ರಂಥ ಕರ್ತೃ ತೆಗೆದುಕೊಂಡಿದ್ದಾನೆಂದು ಆತನೇ ಅತಿ ಸ್ಪಷ್ಟವಾಗಿ ಹೇಳಿಬಿಡುತ್ತಾನೆ. ವಿ. ಚಿಂ. ಯಲ್ಲೂ ಸಹ ಶಾಸ್ತ್ರಗಳಲ್ಲಿನ ಮುಖ್ಯ ಗ್ರಂಥಗಳ ಹೆಸರು ಅಲ್ಲಲ್ಲಿ ಕಾಣಿಸಿಕೊಳ್ಳುತ್ತದೆ.

ಈ ಗ್ರಂಥದ ಪ್ರತಿಪಾದ್ಯ ವಿಚಾರಗಳನ್ನು ಕುರಿತು ಹೇಳುವ ಮೊದಲು ಮತ್ತಿನ್ನೆರಡು ಸಂಗತಿಗಳ ಬಗೆಗೆ ಸ್ವಲ್ಪ ವಿಚಾರ ಮಾಡಬೇಕಾದದ್ದಿದೆ. ಮೊದಲನೆಯದಾಗಿ, ತನ್ನ ಗ್ರಂಥವನ್ನು ಗ್ರಂಥಕರ್ತೃ "ಕವಿತಾಪ್ರಬಂಧ"ವೆಂದು ಉಪೋದ್ಘಾತ ಪದ್ಯದಲ್ಲಿ ಕರೆದುಕೊಂಡಿರುವುದು. ಎರಡನೆಯದು ತನ್ನ ಗ್ರಂಥವು ಒಂದು "ಪ್ರಕರಣ"ವೆಂದು ಹೇಳಿಕೊಳ್ಳುವುದು.

"ಕವಿ"-ಎಂಬ ಶಬ್ದಕ್ಕೆ ಇರುವ ಹಲವಾರು ಅರ್ಥಗಳಲ್ಲಿ "ಪಂಡಿತ"-ಎಂಬುದಾಗಿ ಒಂದು. ಇದರ ಹಿನ್ನೆಲೆಯಲ್ಲಿ ಶಾಸ್ತ್ರವಿಚಾರಗಳ ಅಥವಾ ಪದ್ಯಗಳ ಸಂಕಲನಕಾರರು ತಮ್ಮನ್ನು ಕವಿಗಳೆಂದು ಕರೆದುಕೊಳ್ಳುವುದರ ಔಚಿತ್ಯ ಯಾರಿಗಾದರೂ ಹೊಳೆಯುವಂತಿದೆ.

ಸೂಕ್ತಿ ಸುಧಾರ್ಣವದ ಕರ್ತೃ ಮಲ್ಲಿಕಾರ್ಜುನ "ಸತ್‌ಕವಿ ಮಲ್ಲನ ಕಾವ್ಯ ಸಾರಮಂ" (ಪೀಠಿಕಾ ಪ್ರಕರಣ, 25ನೇ ಪದ್ಯ) ಎಂದು ಬರೆದುಕೊಂಡಿದ್ದಾನೆ. ತನ್ನ ಗ್ರಂಥವು ಅವನಿಗೆ "ಕಾವ್ಯವಿಲಾಸಗೇಹ"ವಾಗಿ ಬೇರೆ ಕಾಣುತ್ತದೆ. ಇದು ಸಾಲ ದೆಂಬಂತೆ ಪ್ರತಿಯೊಂದು ಪುಷ್ಪಿಕಾ ವಾಕ್ಯಗಳಲ್ಲೂ ಸಹ "ಮಲ್ಲಿಕಾರ್ಜುನ ಕವೀಶ್ವರ" ಎಂಬ ಮಾತು ಈ ಗ್ರಂಥದಲ್ಲಿ ಕಂಡುಬರುತ್ತದೆ. ಹೀಗೆಯೇ ಕಾವ್ಯಸಾರವೆಂಬ ಪದ್ಯ ಸಂಕಲನಕಾರ ಮಲ್ಲನು ತನ್ನನ್ನು ಕವಿಪುಂಗವ ಎಂದು ವಿಶೇಷಿಸಿಕೊಂಡಿದ್ದಾನೆ. ಇವೆರಡೂ ಕವಿತೆಗಳ ಸಂಕಲನವೇ ಆಗಿರುವುದರಿಂದ ಕವಿಗಳ ಮೌಲ್ಯ ನಿರ್ಣಯವನ್ನು ಕವಿಗಳೇ ಮಾಡಲು ಶಕ್ತರೆಂದೂ ಕವಿಗಳ ಸೊಗಸಾದ ರಚನೆಗಳನ್ನು ಇವುಗಳಲ್ಲಿ ಆಯ್ಕೆ ಮಾಡಿರುವುದರಿಂದ ಇವೂ ಒಂದು ರೀತಿ ಕಾವ್ಯಗಳೇ (=ಕಾವ್ಯ ಭಾಗಗಳೇ) ಆಗುತ್ತ ವೆಂದೋ ವಾದ ಮಾಡುವುದೇನೋ ಸುಲಭ. ಆದರೆ ವಿ. ಚಿಂ. ಕಾವ್ಯಸಂಕಲನ ಗ್ರಂಥ ವಲ್ಲ. ಅಂದಮೇಲೆ ಇದು ಹೇಗೆ "ಕವಿತಾ ಪ್ರಬಂಧ"ವಾದೀತೆಂಬ ಪ್ರಶ್ನೆ ಉಳಿದೇ ಉಳಿಯುತ್ತದೆ. ಆದರೆ, ಕೆಲವೊಮ್ಮೆ ಶಾಸ್ತ್ರಗ್ರಂಥಗಳನ್ನು ರಚಿಸಿದವರೂ ಸಹ ತಮ್ಮನ್ನು ಕವಿಗಳೆಂದೂ ತಮ್ಮ ಗ್ರಂಥಗಳನ್ನು ಕಾವ್ಯಗಳೆಂದೂ ಕರೆದುಕೊಂಡಿರುವ ನಿದರ್ಶನಗಳಿವೆ.

ಆಯುರ್ವೇದದಲ್ಲಿ ಸುಪ್ರಸಿದ್ಧವಾದ ವಿಷಯ ಸಂಕಲನ ಗ್ರಂಥವಾದ ಶಾರ್ಙ್ಗಧರ ಸಂಹಿತೆಯ ಕರ್ತೃ ಶಾರ್ಙ್ಗಧರ ತನ್ನ ಗ್ರಂಥವು "ಕವಿ"ಗಳ ಹೃದಯದಲ್ಲಿ ನೆಲಸಲಿ ಎಂದು ಹಾರೈಸಿದ್ದಾನೆ. (ವಿವಿಧಗದಾರ್ತಿ-ದರಿದ್ರನಾಶನಂ ಯಾ/ತುರಿರಮಣೀವ ಕರೋತಿ ಯೋಗರತ್ನೈಃ ||ವಿಲಸತು ಶಾರ್ಙ್ಗಧರಸ್ಯ ಸಂಹಿತಾ ಸಾ/ಕವಿಹೃದಯೇಷು ಸರೋಜನಿರ್ಮಲೇಷು|(ಶಾರ್ಙ್ಗಧರಸಂಹಿತಾ. ನಿರ್ಣಯಸಾಗರ ಸಂಸ್ಕರಣ ಪುಟ 397)

ಇದಕ್ಕೆ "ದೀಪಿಕಾ" ಎಂಬ ವ್ಯಾಖ್ಯಾನ ಬರೆದ ಆಥವಮಲ್ಲನು, ಬೇರೆಯವರ ಕಾವ್ಯವನ್ನು ನೋಡಲು ಇಷ್ಟಪಡುವವನೇ ಧೀರ ಎನ್ನುತ್ತಾನೆ. ಅಭಿನವನಿಬಂಧ ರಚನಾಂ ಶ್ರೋತುಂ ಕಃ ಕೋऽತ್ರ ಲೋಲುಪ್ತೋ ಭವತಿ। ಯಃ ಕೃಪಯಾ ಪರಕಾವ್ಯಂ ಪಶ್ಯತಿ ಸ ವೈ ಧೀರಃ ॥ (ಅದೇ ಪುಟ 1)

ಸಂಸ್ಕೃತದಲ್ಲಿ ಬಸವಭೂಪಾಲ ಬರೆದ ಶಿವತತ್ತ್ವರತ್ನಾಕರ ವಾಸ್ತವದಲ್ಲಿ ಒಂದು ಕಾವ್ಯವೆಂದು ಲಿಂಗಣ್ಣ ಕವಿ ತನ್ನ "ಕೆಳದಿ ನೃಪವಿಜಯ"ದಲ್ಲಿ ಹೇಳುತ್ತಾನೆ :

ಮೆರೆವ ಶಿವತತ್ತ್ವರತ್ನಾ-
ಕರವೆಂದೆನಿಪಾ ಸುಭಾಷಿತಸುರದ್ರುಮವೆಂ-
ಬುರುತರ ಕಾವ್ಯದ್ವಯಮಂ-
ವಿರಚಿಸಿ ಸದ್ಯಶವನಾಂತನಾ ಬಸವನೃಪಂ ॥

(ಉದ್ಧೃತ. ಶಿವತತ್ತ್ವರತ್ನಾಕರ. ಪ್ರಾ. ವಿ. ಸಂ. ಪ್ರಕಾಶನ, ಸಂಪುಟ 2, ಪೀಠಿಕೆ ಪುಟ 17)

ವಿ.ಚಿಂ. ಯ ಪ್ರತಿಯೊಂದು ಪರಿಚ್ಛೇದದ ಕೊನೆಯಲ್ಲಿಯೂ ಗ್ರಂಥವನ್ನು ಪ್ರಕರಣವೆಂದು ಕರೆದಿದೆಯಲ್ಲದೆ ಮೊದಲನೆಯ ಪರಿಚ್ಛೇದದ ಪೀಠಿಕಾ ಭಾಗದಲ್ಲಿಯೇ ಪ್ರಕರಣಶಬ್ದದ ಸ್ಪಷ್ಟೋಲ್ಲೇಖವೂ ಇದೆ. ಪ್ರಕರಣ ಎಂಬ ಶಬ್ದದ ವಿವರಣೆ ನೀಡುವ ಸಾಂಪ್ರದಾಯಿಕ ಪದ್ಯವೊಂದು ಹೀಗಿದೆ :

ಶಾಸ್ತ್ರೈಕದೇಶ ಸಂಬದ್ಧಂ ಶಾಸ್ತ್ರಕಾರ್ಯಾಂತರೇ ಸ್ಥಿತಂ।
ಆಹುಃ ಪ್ರಕರಣಂ ನಾಮ ಗ್ರಂಥಭೇದಂ ವಿಪಶ್ಚಿತಃ ॥

ಈ ಶ್ಲೋಕದ ಅಭಿಪ್ರಾಯವನ್ನು ದಿ॥ ಸಚ್ಚಿದಾನಂದೇಂದ್ರ ಸರಸ್ವತಿಗಳು ಕನ್ನಡದಲ್ಲಿ ಹೀಗೆ ತಿಳಿಸುತ್ತಾರೆ : ಶಾಸ್ತ್ರದ ಒಂದು ಭಾಗವನ್ನು ತೆಗೆದುಕೊಂಡು ಶಾಸ್ತ್ರದಿಂದ ಆಗದಿರುವ ಕಾರ್ಯವನ್ನು ಮಾಡಿಕೊಡುವ ಗ್ರಂಥಭಾಗಕ್ಕೆ ಪ್ರಕರಣವೆಂದು ಹೆಸರು. (ಕನ್ನಡ–ಪದ್ಯ–ಉಪದೇಶ ಸಾಹಸ್ರೀ ಮೂರನೇ ಭಾಗ, ಪೀಠಿಕೆ ಪುಟ 12) ಈ ಲೆಕ್ಕಾಚಾರದಂತೆ ವಿವೇಕ ಚಿಂತಾಮಣಿಯಲ್ಲಿ ಶಾಸ್ತ್ರಗಳ ಮುಖ್ಯವಾದ ಸಾರಾಂಶ ಕೊಟ್ಟಿರುವುದು ಹಾಗೂ ಬೃಹತ್ ಶಾಸ್ತ್ರಗಳಲ್ಲಿ ಒಂದೇಟಿಗೇ ಸಿಕ್ಕಲು ಕಷ್ಟವಾದ ವಿಚಾರಗಳನ್ನು ಅಡಕವಾಗಿ ಅಚ್ಚುಕಟ್ಟಾಗಿ ಜೋಡಿಸಿರುವುದು–ಈ ಎರಡು ಕಾರಣಗಳಿಂದ ಪ್ರಕರಣವೆಂಬ ಹೆಸರು ಅದಕ್ಕೆ ಸಲ್ಲುತ್ತದೆ. ಆದರೆ ಸಂಸ್ಕೃತದಲ್ಲಿನ ಪ್ರಕರಣ ಗ್ರಂಥಗಳು ಕೆಲವೊಮ್ಮೆ ಯಾವುದಾದರೂ ಕೆಲವೇ ನಿರ್ದಿಷ್ಟ ವಿಚಾರಗಳ ಅತಿ ವಿಸ್ತೃತ ವಿಶ್ಲೇಷಣೆಗೆ ಹೊರಡುವುದುಂಟು. ಆ ಮಾತು ಬೇರೆ.

ಗ್ರಂಥಗಳಿಗೆ ಪೀಠಿಕೆ ಬರೆಯುವಾಗ ಗ್ರಂಥವನ್ನು ಯಾರಿಗೋಸ್ಕರ ಏತಕ್ಕಾಗಿ ಬರೆಯುತ್ತಿದ್ದೇನೆಂದು ಲೇಖಕರು ತಿಳಿಸುವ ರೂಢಿಯುಂಟಷ್ಟೇ. ಶಾಸ್ತ್ರಗ್ರಂಥಗಳಲ್ಲಿ ಇಂಥ ವಿಚಾರಗಳನ್ನು ಸೇರಿಸಲೇಬೇಕೆಂಬ ನಿಯಮವನ್ನು ಹಿಂದಿನವರು ಮಾಡಿಕೊಂಡಿದ್ದರು. ಇಂತಹ ನಾಲ್ಕು ವಿಚಾರಗಳಿಗೆ ಅನುಬಂಧ ಚತುಷ್ಟಯವೆಂದು ಹೆಸರು.

ಈ ನಾಲ್ಕು ಅನುಬಂಧಗಳು ಯಾವುವೆಂದರೆ ವಿಷಯ, ಸಂಬಂಧ, ಪ್ರಯೋಜನ ಮತ್ತು ಅಧಿಕಾರಿ.

ವಿ.ಚಿಂ.ಯ ಪ್ರಾರಂಭದ ಮಂಗಳಪದ್ಯ, ಮುಂದಿನ ಗದ್ಯದ ಪೀಠಿಕಾಭಾಗ ಹಾಗೂ ಉಪಸಂಹಾರ ಶ್ಲೋಕಗಳಲ್ಲಿ ಅನುಬಂಧ ಚತುಷ್ಟಯ ಬಂದಿದೆ.

ವಿಷಯ : (topic) "ಶ್ರುತಿಸ್ಮೃತಿ ಪುರಾಣೇತಿಹಾಸ ಪುರಾತನೋಕ್ತಿಗಳ ಗನುಸಾರದಿಂದನುಭವಿಗಳಹುದೆನಿಪಂತೆ ಸ್ವಕಪೋಲಕಲ್ಪಿತಮಲ್ಲದ ಸತ್ಯಾರ್ಥಂಗಳನೆ ಸಂಗ್ರಹಿಸಿ ಮುನ್ನುಳ್ಳ ಮಣಿಪುಂಜಮಂ ರಂಜನೆಗೆಯ್ದು ತರವರಿದು ಸರಂಗೋಳಿಸಿ"-ಎಂಬ ಭಾಗದಿಂದ ಶಾಸ್ತ್ರಗಳಲ್ಲಿನ ವಿಚಾರಗಳೇ ಗ್ರಂಥದ ವಿಷಯ ಎಂಬುದು ಗೊತ್ತಾಗುತ್ತದೆ.

ಸಂಬಂಧ : "ಸಂಗ್ರಹಿಸಿ ಮುನ್ನುಳ್ಳ" ಎಂಬ ಭಾಗದಿಂದ ಶಾಸ್ತ್ರೀಯಾರ್ಥ ಗಳನ್ನು ಒಟ್ಟಿಗೆ ಕೂಡಿಸುವುದೇ (ಶಾಸ್ತ್ರವಿಚಾರಕ್ಕೂ ತನ್ನ ಗ್ರಂಥಕ್ಕೂ) ಇರುವ ಸಂಬಂಧವೆಂದು ಸ್ಪಷ್ಟವಾಗುತ್ತದೆ.

ಪ್ರಯೋಜನ : ಈ ಬಗ್ಗೆ ಹಿಂದೆಯೇ ತಿಳಿಸಲಾಗಿದೆ. ಹೆಚ್ಚು ಕಡಿಮೆ ಗ್ರಂಥ ರಚನೆಯ ಉದ್ದೇಶವೂ ಇದರಲ್ಲಿಯೇ ಅಡಕವಾಗುತ್ತದೆ. ಉಪಸಂಹಾರ ಪದ್ಯದಲ್ಲಿ "ಸಂಶಯಸ್ತೋಮವಡಂಗಿ", "ಬೇರೆ ಬಹುಶಾಸ್ತ್ರವನೋದುವ ಬಾಧೆ ಪಿಂಗಿ"ಎನ್ನುವಲ್ಲೀ ಈ ವಿಚಾರ ಬಂದಿದೆ.

ಅಧಿಕಾರಿ : ಮುಮುಕ್ಷು (=ಸಂಸಾರದ ಜಂಜಾಟದಿಂದ ವಿಮುಕ್ತಿ ಪಡೆಯ ಬೇಕೆಂಬ ಅತಿ ತೀವ್ರ ಹಂಬಲವುಳ್ಳವನು.)

ಗ್ರಂಥಕರ್ತೃವಿನ ಮನಸ್ಸಿನಲ್ಲಿ ಮುಮುಕ್ಷುಗಳಿಂದಾಗಿ ಗ್ರಂಥರಚನೆಮಾಡುವ ಉದ್ದೇಶವಿರುವುದರಿಂದಲೇ ವೇದಾಂತ–ಶೈವಯೋಗ–ಆಗಮ ಈ ವಿಚಾರಗಳ ಸಾರ ಸಂಗ್ರಹಕ್ಕೆ ಆದ್ಯತೆ ಸಿಕ್ಕಿರುವುದು. ಲೌಕಿಕ ವಿಚಾರಗಳು ಪಡೆದುಕೊಂಡಿರುವ ಸ್ಥಳಾವ ಕಾಶ ಕಡಿಮೆ.

ಈಗ ವಿ.ಚಿಂ. ಯ ಪರಿವಿಡಿಯನ್ನು ಸಂಗ್ರಹವಾಗಿ ನೋಡಬಹುದು. (ವಿಸ್ತೃತ ವಾದ ವಿಷಯಸೂಚಿ ಮುದ್ರಿತ ಆವೃತ್ತಿಗಳಲ್ಲೀ ಸಿಕ್ಕುವುದರಿಂದ ಅನವಶ್ಯಕವಾದ ಪುನರುಕ್ತಿಯಾಗುತ್ತದೆಂದು ಅದನ್ನಿಲ್ಲಿ ಸೇರಿಸಿಲ್ಲ.)(ಇಲ್ಲಿನ ಅನುಕ್ರಮ ಸಂಖ್ಯೆಗಳು ಪರಿ ಚ್ಛೇದಗಳನ್ನು ಸೂಚಿಸುತ್ತವೆ.)

1. ವೇದಾಂತ–ತತ್ತ್ವಶಾಸ್ತ್ರ (ಇಲ್ಲಿ ಅದ್ವೈತ ಮುಖ್ಯವಾಗಿ ಪ್ರತಿಪಾದ್ಯ ವಿಚಾರ. ಗ್ರಂಥಕರ್ತೃವಿನ ಕಾಲದವರೆಗೆ ಬಂದಿದ್ದ ಕೆಲವು ಮುಖ್ಯ ಅದ್ವೈತ ತತ್ತ್ವಗಳು ಇಲ್ಲಿ ಗೋಚರವಾಗುತ್ತವೆ.)
2. ಶೈವ–ವೀರಶೈವತತ್ತ್ವ.
3. ಸೃಷ್ಟಿವಿಚಾರ—ಬ್ರಹ್ಮಾಂಡಲಕ್ಷಣ, ಪಾತಕಗಳು, ಅರಿಷ್ಟ (=ಮರಣದ ಪೂರ್ವಭಾವಿ ಸೂಚನೆಗಳು.)

4. ಭೂಲೋಕವರ್ಣನೆ–ಕಾವ್ಯಶಾಸ್ತ್ರ ಪರಾಮರ್ಶೆ–ಕಾಮಶಾಸ್ತ್ರ–ಸಂಗೀತ–ನೃತ್ಯ.
5. ಭೂಲೋಕವರ್ಣನೆ—(ಮುಂದುವರೆದಿದ್ದು.)
6. ವಿವಿಧ ಲೋಕಗಳ ವರ್ಣನೆ.
7. ರುದ್ರಪ್ರಪಂಚ ವರ್ಣನೆ.
8. ರುದ್ರರ ಆಧ್ಯಾತ್ಮಿಕ ಸ್ವರೂಪ.
9. ಮರಣಾನಂತರ ಜೀವಿಗಳ ಗತಿ.
10. ಕಾಲ ವಿಚಾರ - ಬ್ರಹ್ಮಾಂಡಾದಿ ಪ್ರಳಯ.

ಈ ಪರಿವಿಡಿಯನ್ನು ಪರಿಶೀಲಿಸುವ ಯಾರಿಗಾದರೂ ಈ ಗ್ರಂಥವು ಮೂಲತಃ ಮುಮುಕ್ಷುಗಳನ್ನು ಉದ್ದೇಶಿಸಿದ್ದು ಎಂದು ಮೇಲ್ನೋಟಕ್ಕೇ ಗೋಚರವಾಗುತ್ತದೆ. ಆದರೆ ಮುಮುಕ್ಷುಗಳಾದವರು ಲೌಕಿಕ ವಿಚಾರಗಳನ್ನು ತಿಳಿದುಕೊಳ್ಳುವುದು ಪಾಪ ಕೃತ್ಯವೇನೂ ಅಲ್ಲ. ಪಾಪಕೃತ್ಯವಲ್ಲ ಎನ್ನುವುದಕ್ಕಿಂತ ಹೆಚ್ಚಾಗಿ, ಲೌಕಿಕ ವಿಚಾರ ಗಳಲ್ಲೂ ಮುಮುಕ್ಷುಗಳಾದವರು ಜನರಿಂದ ಭಲೆ ಎನ್ನಿಸಿಕೊಳ್ಳಬೇಕೆಂದೇ ಕೆಲವರು ಅಭಿಪ್ರಾಯ ಪಡುವುದುಂಟು. ದಯಾನಂದಸರಸ್ವತಿ, ಸ್ವಾಮಿ ವಿವೇಕಾನಂದ, ಪರಮ ಹಂಸ ಯೋಗಾನಂದ ಮುಂತಾದವರ ಜೀವನಚರಿತ್ರಗಳನ್ನು ಪರಿಶೀಲಿಸಿದವರಿಗೆ ಈ ಮಾತು ಚೆನ್ನಾಗಿ ಮನದಟ್ಟಾಗುತ್ತದೆ. ಯೋಗಾನಂದರ ಗುರು ಶ್ರೀಯುಕ್ತೇಶ್ವರರು ಒಂದು ವಿಶಿಷ್ಟ ಸಂದರ್ಭದಲ್ಲಿ ಯೋಗಾನಂದರಿಗೆ ಹೇಳಿದ ಮಾತು ಪ್ರಕೃತ ವಿಚಾರಕ್ಕೂ ಎಷ್ಟೊಂದು ಚೆನ್ನಾಗಿ ಹೊಂದಿಕೊಳ್ಳುತ್ತದೆ:

Divine contemplation should not be made an excuse for material carelessness. (Autobiography of a Yogi by Paramahamsa Yogananda. Jaico edition, Page 149.)

ಹೀಗಾಗಿ ವೇದಾಂತ, ಶಿವಯೋಗ ಮಾತ್ರವಲ್ಲದೇ ಸಂಗೀತಕ್ಕೂ ವಿ.ಚಿಂ, ಯಲ್ಲಿ ಇಂಬು ದೊರೆತಿದೆ. ಕಾಮಶಾಸ್ತ್ರ ಕೂಡಾ ಇದರಲ್ಲಿ ಬಂದಿರುವಾಗ ಕಾವ್ಯ ಶಾಸ್ತ್ರದ ಬಗ್ಗೆ ಸಿಕ್ಕಿರುವ ಜಾಗ ಕೇವಲ ನಾಲ್ಕು ಪ್ಯಾರಾಗಳಷ್ಟು. ಛಂದಸ್ಸಿನ ಬಗ್ಗೆ ಇರುವುದೆಲ್ಲ ಕೇವಲ ಇಪ್ಪತ್ತಾರು ಛಂದಸ್ಸುಗಳ ಹೆಸರಿನ ಪಟ್ಟಿಮಾತ್ರ, ಹಾಗೆಯೇ ಅರವತ್ತಾರು ಅಲಂಕಾರಗಳ ಹೆಸರಿನ ಪಟ್ಟಿ. ಮಹಾಕಾವ್ಯಗಳಲ್ಲಿ ಇರಬೇಕಾದ ಹದಿನೆಂಟು ವರ್ಣನೆಗಳ ಹೆಸರು, ಹತ್ತು "ಗುಣ"ಗಳು, ಮೂರು "ರೀತಿ"ಗಳು ಇಷ್ಟು ಮಾತ್ರ ಕಾವ್ಯಶಾಸ್ತ್ರದಿಂದ ತೆಗೆದುಕೊಂಡಿರುವ ಭಾಗ. ಮೂಲತಃ ಇಲ್ಲಿ ಇನ್ನೂ ವಿಸ್ತಾರವಿದ್ದು ನಮಗೀಗ ಕೆಲವೊಂದು ವಿಭಾಗಗಳು ಸಿಕ್ಕಿಲ್ಲವೋ ಅಥವಾ ಮೂಲದಲ್ಲಿ ಇಷ್ಟು ಮಾತ್ರವೇ ಇತ್ತೋ ಖಚಿತವಾಗಿ ಹೇಳುವುದು ಕಷ್ಟ. ಎರಡ ನೆಯ ಸಂಭಾವ್ಯತೆಗೆ "ಕಾವ್ಯಾಲಾಪಾಂಶ್ಚ ವರ್ಜಯೇತ್" ಎನ್ನುವ ಸಂಸ್ಕೃತದಲ್ಲಿನ ಸಲಹೆ ಕಾರಣವೇ ? ಹಾಗೆ ಹೇಳಲೂ ಯುಕ್ತಿಯ ಬೆಂಬಲವಿಲ್ಲ. ಏಕೆಂದರೆ ಸಂಗೀತ ಸುಮಾರು ಎಂಟೊಂಬತ್ತು ಪುಟಗಳನ್ನಾಕ್ರಮಿಸಿದೆಯಲ್ಲ !

ವಿಶ್ವಕೋಶದಂತಹ ಗ್ರಂಥಗಳಾದ ಸಂಸ್ಕೃತದ ಶಿವತತ್ತ್ವ ರತ್ನಾಕರ, ಅಭಿಲಷಿತಾರ್ಥಚಿಂತಾಮಣಿ ಇವೆರಡರಲ್ಲೂ ಗ್ರಂಥಾದಿಯಲ್ಲೇ ಪರಿವಿಡಿ ಕೊಟ್ಟಿದೆ. ಆದರೆ ವಿ. ಚಿಂ. ಯಲ್ಲಿ ಪರಿವಿಡಿಯಿಲ್ಲ. ಮೊದಲನೇ ಪರಿಚ್ಛೇದ ಬಿಟ್ಟು ಉಳಿದ ಎಲ್ಲ ಪರಿಚ್ಛೇದಗಳ ಪ್ರಾರಂಭದಲ್ಲೂ ಆಯಾ ಪರಿಚ್ಛೇದದ ಮುಖ್ಯ ವಿಷಯವನ್ನು ಅಚ್ಚುಕಟ್ಟಾಗಿ ಸೂಚಿಸುವ ಒಂದೊಂದು ಕಂದ ಪದ್ಯವಿದೆ.

ವಿ. ಚಿಂ. ಯಲ್ಲಿನ ಕೆಲವು ಸ್ವಾರಸ್ಯಗಳನ್ನೀಗ ಗಮನಿಸಬಹುದು: ಇಲ್ಲಿನ ಅದ್ವೈತ ಪ್ರಕ್ರಿಯೆಯು ಸದಾನಂದ ಪ್ರಣೀತವಾದ "ವೇದಾಂತಸಾರ" ಗ್ರಂಥದಲ್ಲಿನ ವಿಚಾರಗಳನ್ನು ಹೆಚ್ಚಾಗಿ ಹೋಲುತ್ತದೆ.

ನ್ಯಾಯದರ್ಶನದಲ್ಲಿ "ಉದ್ದೇಶ, ಲಕ್ಷಣ, ಪರೀಕ್ಷೆ" ಎಂಬ ಮೂರು ಪಾರಿಭಾಷಿಕ ಶಬ್ದಗಳು ಬರುವುದುಂಟು. ಅವುಗಳ ಅರ್ಥವ್ಯಾಪ್ತಿಯ ವಿಚಾರ ಎಲ್ಲಾ ಶಾಸ್ತ್ರಗಳಿಗೂ ಉಪಯೋಗಕರವಾದದ್ದರಿಂದಲೋ ಏನೋ,ಅದ್ವೈತ ವಿವರಣೆಯಲ್ಲಿಯೇ ಅವು ವಿ. ಚಿಂ. ಯಲ್ಲಿ ಕಾಣಿಸುತ್ತವೆ.

ಅಭಾವವೆಂಬ ಭಾವ ಪದಾರ್ಥವನ್ನು ಅದ್ವೈತಿಗಳು ಒಪ್ಪುವುದಿಲ್ಲ. ಆದರೂ ಅದ್ವೈತ ವಿಚಾರದಲ್ಲಿ ಅದನ್ನು ಸೇರಿಸಿರುವುದಕ್ಕೆ (ಪುಟ 21) ಕಾರಣ ತಿಳಿಯದು.

ತುರೀಯವೆಂಬ ಹೆಸರಿನ ಮತ್ತೊಂದು ಅವಸ್ಥೆ ಆತ್ಮನಿಗೆ ಇದೆಯೆಂದು ಪ್ರಾಚೀನ ವೇದಾಂತದಲ್ಲಿ ಒಪ್ಪಿಲ್ಲ. ಜಾಗ್ರತ್–ಸ್ವಪ್ನ–ಸುಷುಪ್ತಿ–ಯೆಂಬ ಮೂರು ಅವಸ್ಥೆಗಿಂತ ಭಿನ್ನನಾದವನು ಆತ್ಮ ಎಂಬುದನ್ನು ತೋರಿಸಲು "ತುರೀಯ"ವೆಂಬ ಶಬ್ದದ ಬಳಕೆಯಾಗುತ್ತದೆ. ಈ ರಹಸ್ಯದ ಸ್ಪಷ್ಟ ಉಲ್ಲೇಖ ವಿ. ಚಿಂ. ನಲ್ಲಿದೆ. (ಪುಟ 34)

ಪರಾ, ಪಶ್ಯಂತೀ, ಮಧ್ಯಮಾ, ವೈಖರೀ ಎಂಬ "ವಾಕ್"ನ ನಾಲ್ಕು ಪ್ರಭೇದಗಳನ್ನು ತಂತ್ರದಲ್ಲಿ ವರ್ಣನೆ ಮಾಡುವಾಗ 1. ನವಿಲಿನ ಮೊಟ್ಟೆಯಲ್ಲಿ ನವಿಲು ಅತಿಸೂಕ್ಷ್ಮವಾಗಿ ಹುದುಗಿರುವಂತೆ "ಪರಾ". 2. ಪಲ್ಲಕ್ಕಿಯೊಳಗೆ ಕುಳಿತಿರುವವರು ಸ್ಪಷ್ಟವಾಗಿ ಕಾಣದಂತೆ ಇರುವ ರೀತಿಯಲ್ಲಿ "ಪಶ್ಯಂತೀ" 3. ಕಿಟಕಿಯ ಸರಳುಗಳ ಹಿಂದೆ ಇರುವವರು ಕಾಣಿಸುತ್ತಿದ್ದರೂ ನೋಡುವವರಿಗೆ ಹಾಗೂ ನೋಡಲ್ಪಡುವವರಿಗೆ ಮಧ್ಯೆ ತಡೆ ಇರುವಂತೆ "ಮಧ್ಯಮಾ", ನಾಲ್ಕನೆಯ ವಾಕ್‌ಗೆ ಯಾವ ತಡೆಯೂ ಇಲ್ಲ– ಇದೇ "ವೈಖರೀ"–ಹೀಗೆ ತಂತ್ರಶಾಸ್ತ್ರದ ಶ್ಲೋಕವೊಂದು ವರ್ಣಿಸುತ್ತದೆ.[1] ಇದು ವಿ. ಚಿಂ.ಯಲ್ಲಿ ಸ್ವಲ್ಪ ವ್ಯತ್ಯಾಸವಾಗಿ ಬಂದಿದೆ (ಪುಟ 132).

(ಶ್ರೀ ಜಿ. ಎ. ಶಿವಲಿಂಗಯ್ಯನವರು 1989ರಲ್ಲಿ ಸಂಪಾದಿಸಿ ಪ್ರಕಟಿಸಿದ ವಿ. ಚಿಂ.ಯ ಆವೃತ್ತಿಯನ್ನು ಈ ಲೇಖನದಲ್ಲಿ ಬಳಸಲಾಗಿದೆ.)

---

*ಶ್ಲೋಕ ಹೀಗಿದೆ : ಶಿಖಂಡ್ಯಂಡರಸನ್ಯಾಯಃ ಶಿಬಿಕಾನ್ಯಾಯ ಏವ ಚ ।
ಅಯಃಶಲಾಕಾನ್ಯಾಯಶ್ಚ ತ್ರಿವಿಧೋ ನ್ಯಾಯವೈಭವಃ ॥

ಉದ್ಧೃತ : ನಿತ್ಯಾಷೋಡಶಿಕಾರ್ಣವಃ ಸಂ ವ್ರಜವಲ್ಲಭದ್ವಿವೇದೀ ।
ಸಂಪೂರ್ಣಾನಂದ ಸಂಸ್ಕೃತ ವಿಶ್ವವಿದ್ಯಾಲಯ ಪ್ರಕಟನೆ (1968)

# ಕೆಳದಿ ರಾಜರು ಮತ್ತು ಅವರ ಪ್ರಮುಖ ಸಾಧನೆಗಳು

## ಕೆಳದಿ ಗುಂಡಾಜೋಯಿಸ್

ದಕ್ಷಿಣ ಭಾರತದ ಭವ್ಯ ಇತಿಹಾಸ ಸಂಪುಟಗಳಲ್ಲಿ ಸುಮಾರು 350 ವರ್ಷಗಳ ವರೆಗೆ ಹೆಮ್ಮೆಯಿಂದ ಮೆರೆದ ಕೆಳದಿ ರಾಜ್ಯ ತನ್ನದೇ ಆದ ವೈಶಿಷ್ಟ್ಯ ಹೊಂದಿ ಕನ್ನಡದ ಹಿರಿಮೆಯಲ್ಲಿ ಅಗ್ರಸ್ಥಾನ ಪಡೆದಿದೆ. ಈ ರಾಜವಂಶದ ಇತಿಹಾಸವನ್ನರಿಯಲು ದೊರೆಯುವ ಮೂಲ ಸಾಮಗ್ರಿಗಳು ಅಪಾರವಾಗಿದ್ದು ದೇಶ ವಿದೇಶಗಳಲ್ಲಿ ಚೆದರಿಹೋಗಿವೆ[1]. ಬಹಳಷ್ಟು ಆಕರ ಹಾಗೂ ಅವಶೇಷಗಳು ಶರಾವತಿ-ವಾರಾಹಿ ಯೋಜನೆಯಡಿಗಳಲ್ಲಿ ಜಲಾವೃತವಾಗಿವೆ. ಅಳಿದುಳಿದ ಸಾಮಗ್ರಿಗಳಿಂದ ಘನೀಕೃತವಾದ ಕೆಳದಿಯ ಸಮಗ್ರ ಚರಿತ್ರೆಯನ್ನು ಸಿದ್ಧಪಡಿಸುವುದು [ಮುಂದಿನ ಪೀಳಿಗೆಗೆ] ಎಂದಿಗಿಂತ ಈಗ ಹೆಚ್ಚಿನ ಅಗತ್ಯ ಕರ್ತವ್ಯಗಳಲ್ಲೊಂದಾಗಿದೆ.[2]

## ಕೆಳದಿ ಅರಸುಕುಲದ ಮೂಲ

ಜಿಂಜೀ, ಬೆಂಗಳೂರು ಸಂಸ್ಥಾಪಕ ಮಾಗಡಿ ಕೆಂಪೇಗೌಡರಂತೆಯೇ ಕೆಳದಿ ಸಂಸ್ಥಾನದ ಮೂಲ ಇತಿಹಾಸವನ್ನು ಕುರಿತಂತೆ ದಂತಕಥೆಗಳು ಪ್ರಚಲಿತವಿವೆ. ಕೆಳದಿಯ ಸಮೀಪ ಹಳ್ಳಿಬಯಲಡಲ್ಲಿ ಬಸವಪ್ಪ ಬಡ ರೈತ. ಈತನ ಹೆಂಡತಿ ಬಸವಮಾಂಬೆ. ಇವರಿಗೆ ಚೌಡಪ್ಪ, ಭದ್ರಪ್ಪರೆಂಬ ಈರ್ವರು ಮಕ್ಕಳು. ಅಕಾಲ ಮರಣಕ್ಕೆ ತುತ್ತಾದ ಬಸವಪ್ಪನ ಅನಂತರ ಮಕ್ಕಳ ಯೋಗಕ್ಷೇಮ ಬಸವಮ್ಮನ ಪಾಲಿಗೆ ಬಂತು. ಚೌಡಪ್ಪನು ಒಂದು ದಿನ ಬೇಸಿಗೆಯಲ್ಲಿ ಆಯಾಸಗೊಂಡಿದ್ದರಿಂದ ಸನಿಹದಲ್ಲಿರುವ ಮಾವಿನ ಮರದಡಿಯಲ್ಲಿ ವಿಶ್ರಮಿಸಿಕೊಳ್ಳುತ್ತಿದ್ದಂತೆ ನಿದ್ರಾಪರವಶನಾದನು. ಅಲ್ಲಿರುವ ನಾಗಸರ್ಪವೊಂದು ಇವನ ಮುಖಕ್ಕೆ ಬಿಸಿಲು ತಾಕದಂತೆ ಹೆಡೆ ಬಿಚ್ಚಿಕೊಂಡು

---

1. ಲಂಡನ್‌ನಲ್ಲಿರುವ ಮೆಕಂಜಿ ಸಂಗ್ರಹದಲ್ಲಿರುವ ಇಂತಹ ಹಲವಾರು ದಾಖಲೆಗಳನ್ನು ಡಾ॥ ಕಲ್ಬುರ್ಗಿ ಅವರು ಶೇಖರಿಸಿದ್ದಾರೆ.

2. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಮುರುಘರಾಜೇಂದ್ರ ಸ್ವಾಮಿಗಳು ಈ ದಿಸೆಯಲ್ಲಿ ಕಾರ್ಯಪ್ರವೃತ್ತರಾಗಿರುವುದು ಶ್ಲಾಘನೀಯವಾಗಿದೆ. ಈಚೆಗಂತೂ ಸಂಪ್ರಬಂಧಗಳಿಗೆ ಕೆಳದಿ ಇತಿಹಾಸಾಂಶಗಳಿಗೇ ವಿದ್ವಾಂಸರು ಮೊರೆಹೋಗುತ್ತಿರುವುದು ಕಂಡುಬಂದಿದೆ.

ನೆರಳುಂಟುಮಾಡಿತಂತೆ[3]. ಅಲ್ಲಿಗೆ ಮಾರ್ಗಸ್ಥನಾಗಿ ಬಂದಿದ್ದ ವೆಂಕಟಾದ್ರಿ ಯಜಮಾನನು ಇದನ್ನು ಕಂಡು ಅವಾಕ್ಕಾಗಿ ನಿಂತು ವೀಕ್ಷಿಸಿದನು. ಬಹು ಹೊತ್ತಾದರೂ ಮಗನು ಬಾರದಿದ್ದುದು ಕಂಡು ಬಸಮ್ಮನು ಹುಡುಕಿಕೊಂಡು ಬರಲು ಈ ದೃಶ್ಯವನ್ನು ಕಂಡು ಸ್ತಂಭೀಭೂತಳಾದಳು. ಸ್ವಲ್ಪ ಹೊತ್ತು ಕಳೆದಮೇಲೆ ಗೌಡನು ಎಚ್ಚೆತ್ತು ಸುತ್ತಲಿನ ಹಾಗೂ ಸರ್ಪವನ್ನು ಕಂಡು ದಿಗ್ಭ್ರಾಂತನಾದನು. ವೆಂಕಟಾದ್ರಿಯು ಚೌಡಗೌಡನಿಗೆ ಧೈರ್ಯನೀಡಿ ನಡೆದ ಸಂಗತಿಯನ್ನು ತಿಳಿಸಿ 'ನಿನಗೆ ರಾಜ್ಯಾಧಿಪತ್ಯ ಯೋಗವಿದೆ.' ಎಂದನು.* ವಿಚಿತ್ರ ರೀತಿಯಲ್ಲಿ ಸನ್ನೆ ಮಾಡಿದ ಸರ್ಪದ ಸೂಚನೆಯಂತೆ ಅದನ್ನು ಹಿಂಬಾಲಿಸಲಾಗಿ ನಾಗಸರ್ಪವು ಪ್ರದೇಶವೊಂದನ್ನು ಸಂಜ್ಞೆಯ ಮುಖಾಂತರ ತೋರಿಸಿತಂತೆ. ಭವಿಷ್ಯಸೂಚನೆಯಲ್ಲಿ ಭೂಗತ ನಿಧಿಯೊಂದಿರುವುದು ಕಂಡುಬಂದಿದ್ದರಿಂದ, ಇದನ್ನು ಪಡೆದುಕೊಳ್ಳಲು ನರಬಲಿಯಿತ್ತಲ್ಲಿ ನಿಧಿ ಕರಗತವಾಗುವುದಾಗಿ ಕನಸಾಯಿತಂತೆ. ಪ್ರಾಮಾಣಿಕ ಸೇವಕರಾಗಿದ್ದ ಎಡವ–ಮುರಾರಿ ಎಂಬೀರ್ವರು ದಾಗಿ ತಾವಾಗಿಯೇ ಮುಂದೆ ಬಂದು ದೇಹತ್ಯಾಗ ಮಾಡಿಕೊಂಡರಂತೆ. ಈ ಮುಖಾಂತರ ನಿಧಿಯು ಕರಗತವಾಯಿತಂತೆ.

## ಕೆಳದಿ ಶ್ರೀರಾಮೇಶ್ವರ

ಕವಿ ಲಿಂಗಣ್ಣ ಕೆಳದಿ ನೃಪವಿಜಯದಲ್ಲಿ ನಿರೂಪಿಸಿದಂತೆ–ಭದ್ರಪಾಗ್ರಜನಪ್ಪ ಚೌಡಪ್ಪನ ಸ್ವಪ್ನದೊಳ್ ಶ್ರೀಮತ್ಪರಮೇಶ್ವರಂ ಮನಂಗೊಳಿಪ್ಪ ವೃದ್ಧಜಂಗಮ ಸ್ವರೂಪದಿಂ ಪ್ರಸನ್ನನಾಗಿ ಕೆಳದಿಪುರವರದೆಡೆಯೊಳ್ ಸೀಗೆವಳ್ಳಿಯೆಂಬ ತಾಣದೊಳ್ ತರುಗುಲ್ಮಲತಾ ಪ್ರತಾನಾವೃತಮಾದ ಸೀಗೆವೆಳೆಯ ಮಧ್ಯದೊಳ್ ರಾಮೇಶ್ವರನೆಂಬ ಮಹಾದಿವ್ಯಲಿಂಗಂ ನೆಲಸೆರ್ಪುದಾಲಿಂಗಂ ಬಹುಕಾಲಮಾರಭ್ಯ ವಲ್ಮೀಕಾಚ್ಛಾದಿತಮಾಗಿರ್ಪುದಲ್ಲಿ ತಲ್ಲಿಂಗಮಿರ್ಪುದರ್ಕೆ ಕುರುಹೇನೆಂದೊಡೆ ನಿನ್ನ ಮನೆಯೊಳೆಸೆವ ಕಪಿಳೆವಣ್ಣದ ಪಸುಕರುವೆರಸಾತಾಣಮಸ್ಸೈದಿನಿಂದಾ ಪುತ್ತದ ಮೇಗಡೆಯೊಳ್ ಪ್ರತಿದಿನಂ ಪಾಲ್ಗರೆದು ಬರುತಿರ್ಪುದೆ ಕುರುಹಾಲಿಂಗಮಂ ಜನರ ಕಣ್ಮನಕ್ಕೆ ಗೋಚರಮಪ್ಪಂತು ನಿಮಿರ್ಚಿಸಿ ತದ್ರಾಮೇಶ್ವರ ಲಿಂಗಮಂ ಸದ್ಭಕ್ತಿಯಿಂದರ್ಚಿಸಲ್ ನಿನಗಖಂಡ ಪೃಥ್ವೀಪತಿತ್ವಂ ಕೈಸಾರ್ವುದೆಂದುಸಿರ್ದಾ ಜಂಗಮೂರ್ತಿಯಂತರ್ಧಾನಮಸ್ಸೈದಲೆಚ್ಚೆತ್ತು ಪರಮ ಹರ್ಷಿತನಾಗಿ ನಿಜಮಾತೃವಪ್ಪ ಬಸವಾಂಬಿಕೆಯೊಳಿಂತು ಕಂಡ ಸ್ವಪ್ನವನುಸಿರಲದಂ ಕೇಳ್ದಿಂತು ಸ್ವಪ್ನದೊಳ್ ನಿರೂಪಿಸಿ ಪೋದ ಜಂಗಮಮೂರ್ತಿ ಸಾಕ್ಷಾತ್ಪರಮೇಶ್ವರನೆಂಬುದೆ ನಿಶ್ಚಯಮಾ ರಾಮೇಶ್ವರ ಲಿಂಗಕ್ಕೆ ಭಕ್ತಿಯೊಳ್ ನಡೆಕೊಂಡೊಡೆ ಮುಂದೆ ನಿನಗೆ ಮಹಾಭಿವೃದ್ಧಿಯುಂಟಪ್ಪುದರ್ಕೆ ಸಂದೇಗಮಿಲ್ಲೆಂದುಸಿರಲಂತಾ

---

3. ನಾಗಸರ್ಪವು ಮರದ ಕೊಂಬೆಯಿಂದಲೇ ಹೆಡೆ ಬಿಚ್ಚಿಕೊಂಡು ನೆರಳುಂಟು ಮಾಡಿತೆಂಬ ಹೇಳಿಕೆಯೊಂದಿದೆ.

* ವೆಂಕಟಾದ್ರಿಯ ಪೂರ್ವೇತಿಹಾಸ ಕುರಿತು 'ಕೆಳದಿಯ ಸಂಕ್ಷಿಪ್ತ ಇತಿಹಾಸ' ಕೃತಿ ನೋಡಿರಿ.

ಮಾತಂ ಕೇಳ್ದು ಮರುದಿವಸಂ ಬೇಹುಚರರಂ ಕಾಯ್ಪಿಕ್ಕಿ ನಿಜಮಂದಿರದೊಳಿರ್ಪ ಕಪಿಲೆ ವಣ್ಣದ ಪುಸುವಾಪುತ್ತದೆಡೆಗೈದಿ ಸುರಭಿಯಂ ಕರೆದು ಬರ್ಪುದಂ ಗೋರಕ್ಷಕರ ಮುಖ ದಿಂದರಿದಲ್ಲಿಗೈದಿಯಾ ಪುತ್ತವನಗುಳಿಸಿ ನೋಡಲದರೊಳ್ ಕಂಗೊಳಿಸುತಿರ್ಪ ಮಂಗಲ ಮೂರ್ತಿಯಪ್ಪ ಶ್ರೀ ರಾಮೇಶ್ವರಲಿಂಗಮಿರಲ್ಕಂಡು ವಿಸ್ಮಿತನಾಗಿ ಕರಸರೋಜಮಂ ಮುಗಿದು ಭಯಭರಿತ ಭಕ್ತಿಯಿಂ ಪೊಡಮಟ್ಟು........

ಹೀಗೆ ಗೋಚರಿಸಿದ ಶ್ರೀ ರಾಮೇಶ್ವರ ಲಿಂಗದ ಪ್ರತಿಷ್ಠಾಪನೆಯಾಯಿತು.

## ನಾಗರ ಮುರಿ

ಚೌಡಗೌಡನ ಸೇವಕನೊಬ್ಬನಿಗೆ ಹೊಲ ಉಳುವಾಗ ಕಬ್ಬಿಣದ ಕತ್ತಿಯೊಂದು ಗೋಚರಿಸಿತಂತೆ. ಅವನು ಅದನ್ನು ಕೊಂಡೊಯ್ದು ಮನೆಯ ಮುಂಭಾಗದ ಚಪ್ಪರದಲ್ಲಿ ತೂಗುಹಾಕಿದನಂತೆ. ಅಲ್ಲಿದ್ದ ಮಾಂಸದ ಚರ್ಮವೊಂದರ ವಾಸನೆಗೆ ಕಾಗೆಗಳು ಬಂದ ಕೂಡಲೇ ಈ ಕತ್ತಿಯು ಮೇಲಕ್ಕೆ ಹಾರಿ ಅವುಗಳನ್ನು ಓಡಿಸುತ್ತಿತ್ತಂತೆ. ಅಕಸ್ಮಾತ್ತಾಗಿ ಅಲ್ಲಿಗೆ ಆಗಮಿಸಿದ ಚೌಡಗೌಡನು ಇದನ್ನು ಕಂಡು ಆಶ್ಚರ್ಯಗೊಂಡು ಆ ಕತ್ತಿಯನ್ನು ತನಗೆ ನೀಡಿದಲ್ಲಿ ಬದಲಿಯಾಗಿ ಕತ್ತಿಯನ್ನೂ-ಹಣವನ್ನೂ ನೀಡುವುದಾಗಿ ತಿಳಿಸಿದನು. ಸೇವಕನು ಹಣವನ್ನು ತೆಗೆದುಕೊಳ್ಳದೆ ಗೌಡನಿಗೆ ಕತ್ತಿಯನ್ನು ಕಾಣಿಕೆಯಾಗಿತ್ತನು. ಹರ್ಷಗೊಂಡ ಗೌಡನು ಅವನನ್ನು ಸನ್ಮಾನಿಸಿ ಭೂಸ್ವಾಸ್ಥ್ಯವಿತ್ತನು. ಕತ್ತಿಯನ್ನು ಶುದ್ಧಗೊಳಿಸಿ 'ನಾಗರ ಮುರಿ' ಎಂಬುದಾಗಿ ಅದಕ್ಕೆ ಹೆಸರಿಟ್ಟು ಗೌಡನು ತನ್ನಲ್ಲಿರಿಸಿಕೊಂಡನು.*

## ಪುಂಭೂಮಿ ಇಕ್ಕೇರಿ

ಕೆಳದಿ ಕವಿ ಲಿಂಗಣ್ಣನು-ನೃಪವಿಜಯದಲ್ಲಿ.—

ಕಂ॥ ಸುತಸಹಿತಂ ಚೌಡಪಭೂ
ಪತಿ ತಾನಿಕ್ಕೇರಿಗೈದಿರಲ್ ಮೊಲಮೊಂದು
ನ್ನತಮಾದ ಶುನಕನಂ ತ
ತ್ಕ್ಷಿತಿಯೊಳ್ ಬೆಂಬತ್ತಿ ಪರಿಯುತಿರಲೀಕ್ಷಿಸುತುಂ

ಕಂ॥ ಇದು ತಾಂ ಪುಂಭೂಮಿಯೆನಿ
ಪ್ಪುದನರಿದೊಡನಲ್ಲಿ ಕೋಂಟೆಯಂ ಬಲಿದು ಬಳಿ
ಕ್ಕದರೊಳರಮನೆಯನಿಂದ್ರನ
ಸದನಕ್ಕಧಿಕಮೆನೆ ರಚನೆಗೈಸಿದನನುವಿಂ

---

* ಇದೇ ನಾಗರ ಮುರಿ ಕತ್ತಿಯಿಂದಲೇ ಮೂರನೇ ದೊರೆ ಕೆಳದಿ ದೊಡ್ಡಸಂಕಣ್ಣನು ದೆಹಲಿಯ ಅಕ್ಬರನಲ್ಲಿದ್ದ ಅಂಕುಶಖಾನನನ್ನು ಖಡ್ಗಯುದ್ಧದಲ್ಲಿ ತುಂಡರಿಸಿದುದನ್ನು ಕೆಳದಿ ನೃಪವಿಜಯ ಶಿವತತ್ವ ರತ್ನಾಕರಗ ಉಲ್ಲೇಖನಗಳಲ್ಲಿ ಅವಲೋಕಿಸಬಹುದು.

ಹೀಗೆ ಉಲ್ಲೇಖಿಸಿದಂತೆ ಮೊಲವು ಬೇಟೆ ನಾಯಿಯನ್ನು ಬೆನ್ನಟ್ಟಿದ ತಾಣವನ್ನು ವೀರಭೂಮಿಯೆಂದು ಗೌಡನು ಪರಿಗಣಿಸಿ ಇಕ್ಕೇರಿಯಲ್ಲಿ ಕೋಟೆ - ಅರಮನೆಗಳನ್ನು ನಿರ್ಮಿಸಿ ಪ್ರಜೋತ್ಪತ್ತಿ ಸಂವತ್ಸರದ ಮಾಘ ಶುದ್ಧ ಏರಡು ಇಕ್ಕೇರಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಪಟ್ಟವೇರಿದನು.

## ಕೆಳದಿ ಮೂಲದ ಚಾರಿತ್ರಿಕ ವಿಶ್ಲೇಷಣೆ

ಕೆಳದಿ ಬಸವರಾಜನು ಶಿವತತ್ವ ರತ್ನಾಕರದಲ್ಲಿ —

ರಣೇ ವನೇ ಜಲೇ ಶೈಲೇ ಸುಪ್ತಂ ಮತ್ತಂ ಚ ದೇಹಿನಮ್ ।
ಪುರಾಕೃತಾನಿ ಪುಣ್ಯಾನಿ ರಕ್ಷಂತೀತಿ ನ ವಾಂಗ್ಮೃಷಾ ॥

ಎಂಬಂತೆ ಪೂರ್ವಜನ್ಮದ ಪುಣ್ಯದ ಫಲದಿಂದ ಲಭಿಸಿದ ಅಘಟಿತ ಘಟನಾ ಸಂಗತಿಗಳು ಇತಿಹಾಸಕ್ಕೆ ಸೇರ್ಪಡಿಸಲು ಅನರ್ಹವಾಗಿದ್ದರೂ ಅಲ್ಲಗಳೆಯಲು ಸಾಧ್ಯವಿಲ್ಲವೆಂಬುದಾಗಿ ಡಾ|| ಸೂರ್ಯನಾಥ್ ಕಾಮತ್ ಹಾಗೂ ಡಾ|| ಚಿದಾನಂದಮೂರ್ತಿಗಳು ಅಭಿಪ್ರಾಯಪಟ್ಟಿದ್ದಾರೆ. ಈ ದಂತ ಕಥೆಯ ಸಾಧಾರಕ್ಕೆ ಕೆಳದಿಯಲ್ಲಿರುವ ಅವಶೇಷಗಳು, ಶಾಸನಗಳು, ಜಾನಪದ ಸಂಗತಿಗಳು ಹಾಗೂ ಸಮಕಾಲೀನ ಸಾಹಿತ್ಯಗಳು ಸಹಕಾರ ನೀಡುತ್ತವೆ. ಚೌಡಗೌಡ - ಭದ್ರಗೌಡನ ಹಳ್ಳಿ ಬಯಲಿನ ನಿವೇಶನ, 'ಹೂವಪ್ಪನ ಗುಂಡಿ' ಎಂದು ಹೇಳಲಾದ ಪ್ರದೇಶದಲ್ಲಿ ನಿಧಿ ಲಭಿಸಿದ ಜನಪದ ಸಂಗತಿಗಳು, ಬಲಿದಾನವಿತ್ತ ಕಟ್ಟೆ ಹಾಗೂ ಕೊಳ, ಶ್ರೀ ರಾಮೇಶ್ವರ, ವೆಂಕಟಾದ್ರಿಯ ನಿವಾಸ, ಸಾಲುಮರ, ಕೆರೆ, ಎಡವ - ಮುರಾರಿ ಸ್ಮರಣಾರ್ಥವಾಗಿ ನಿರ್ಮಿಸಿದ ಬೃಹತ್ ಬೊಂಬೆಗಳನ್ನು ಈಗಲೂ ರಥೋತ್ಸವದಲ್ಲಿ ಪೂಜೆಗೊಳ್ಳುತ್ತಿರುವುದು ಸಾಕ್ಷಿಯಾಗಿವೆ.[1]. 9-12-1506ರ ಚೌಡಪ್ಪನ ಕಾಲದ ಹಾಗೂ ವೆಂಕಟಾದ್ರಿಯ ಶಾಸನವೂ ಕಂಡುಬಂದಿವೆ[2].

ಸಾಹಿತ್ಯ ಸಾಮಗ್ರಿಗಳಲ್ಲಿ ಕೆಳದಿ ಬಸವರಾಜ ವಿರಚಿತ ಶಿವತತ್ವ ರತ್ನಾಕರ, ಲಿಂಗಣ್ಣನ ಕೆಳದಿ ನೃಪವಿಜಯ, 1912ರಲ್ಲಿ ಪ್ರಕಟವಾದ ನಡೆಹಳ್ಳಿ ವೆಂಕಟಪ್ಪನವರ "ಕೆಳದಿ ಸಂಸ್ಥಾನದ ಚರಿತ್ರೆ" ಶ್ರೀ ಕಾಸ್ಲೆ ಮನೆತನದವರ ಅಪ್ರಕಟಿತ ಕೈಬರಹ ಪ್ರತಿ, ಕೆಳದಿ ಜೋಯ್ಸರಲ್ಲಿರುವ ಹಸ್ತಪ್ರತಿಗಳು ಮಾತ್ರ ಸದ್ಯಕ್ಕೆ ಉಪಲಬ್ಧವಿವೆ. ದಿ|| ಎ. ಆರ್. ಕೃ. ಅವರು ಕೆಳದಿ ನೃಪವಿಜಯದ ಉಪೋದ್ಘಾತದಲ್ಲಿ "ಕೆಳದಿ ಸಂಸ್ಥಾನದ ಚರಿತ್ರೆ" ಎಂಬ ಸಂಕ್ಷೇಪ ಗದ್ಯಾನುವಾದ 1918-1919ರಲ್ಲಿ "ಮಲೆನಾಡು ಸಮಾಚಾರ"ದಲ್ಲಿ ಆಸ್ಥಾನ ಕವಿ ಕೃಷ್ಣಪ್ಪನವರಿಂದ ಬರೆಯಲ್ಪಟ್ಟಿತೆಂದು ಸಂಪಾದಕರು ತಿಳಿ

---

1. ಪಕ್ಷೆ ನೋಡಿರಿ. ಹಲವು ಸ್ಮಾರಕಗಳು ಈಗಾಗಲೇ ಕಣ್ಮರೆಯಾಗಿವೆ.
2. ಈ ಶಾಸನದ ಆಧಾರದ ಮೇರೆಗೆ ಸನ್ನದು ನಂ. 36694ರ ಪ್ರಕಾರ ಕೆಳದಿ ಜೋಯಿಸ್ಸರಿಗೆ ಸರಕಾರದಿಂದ ಇತ್ತೀಚಿನವರೆಗೂ ಸನ್ನದು ಸಂದಾಯವಾಗುತ್ತಿತ್ತು.

ಸಿರುವುದಾಗಿ ಹೇಳಿದ್ದಾರೆ. ಮುಂದುವರಿದು ೪೦೦ ಶ್ಲೋಕಗಳುಳ್ಳ ಕೆಳದಿ ಚರಿತ್ರೆಯೊಂದರ ಹಸ್ತಪ್ರತಿಯನ್ನು ದಿವಾನ್ ಪೂರ್ಣಯ್ಯನವರು ಬಂಗಾಲ ಸರಕಾರಕ್ಕೆ ರವಾನಿಸಿರುವುದಾಗಿ ಬುಕನನ್ ಸಾಹೇಬನ ಸಂಗತಿಗಳಿಂದ ಕಂಡುಬಂದಿದೆ ಎಂದಿದ್ದಾರೆ. ಇವುಗಳು ಅಲಭ್ಯ. ಆಂಧ್ರದ ಕೃಷ್ಣದೇವರಾಯ ವಿಶ್ವವಿದ್ಯಾಲಯದ ನಿವೃತ್ತ ಪ್ರಾಧ್ಯಾಪಕ ಡಾ|| ಬಿ. ಆರ್. ಗೋಪಾಲ್ ಅವರು ಕೆಳದಿ ನೃಪವಿಜಯ ಕೃತಿಯ ಪ್ರಾಮಾಣ್ಯವನ್ನು ಕುರಿತು ಲೇಖನ ಬರೆದಿದ್ದಾರೆ.* ಕೆಳದಿ ನಾಯಕರ ವಂಶಾವಳಿ ಕುರಿತು ಕೆಳದಿ ನೃಪವಿಜಯವನ್ನೇ ಆಧರಿಸಿ ಚೌಡಪ್ಪನು ಇಕ್ಕೇರಿಯಲ್ಲಿ 28-1-1511 ರಲ್ಲಿ ಪಟ್ಟವೇರಿದ ಹಾಗೂ ಅವನ ಅಂತ್ಯಕಾಲ 4-5-1513ರ ದಿನಾಂಕವನ್ನು ಸಕಾರಣವಾಗಿ ಪ್ರತಿಪಾದಿಸಿದ್ದು ಕೆಳದಿ ನೃಪವಿಜಯದಲ್ಲಿ ಉಲ್ಲೇಖಿಸಿದ ಈ ದಿನಾಂಕಗಳು ಡಾ|| ಸ್ವಾಮಿಕಣ್ಣುಪಿಳ್ಳೆರವರ ಎಫೆಮೆರೀಸ್ ಮೇರೆಗೆ ಸರಿಹೊಂದಿದ ಮೇಲೆ ಈ ಆಕ್ಷೇಪವು ಗಣನೀಯವಲ್ಲವೆಂಬುದಾಗಿ ಸಿದ್ಧವಾಗುತ್ತದೆ. ಚೌಡಪ್ಪನ ಪಟ್ಟದ ಕಾಲ ಕೆಳದಿ ನೃಪವಿಜಯದಲ್ಲಿ ಉಲ್ಲೇಖಿಸಿದಂತೆ ದಿ|| 8-1-1500 ಆಗುತ್ತದೆ. 9-12-1506ರ ಚೌಡಪ್ಪನ ಶಾಸನವೊಂದು ಇದಕ್ಕೆ ಬೆಂಬಲವೀಯುತ್ತದೆ.

## ಸದಾಶಿವನಾಯಕ (1514-1546)

ಕ್ರಿ. ಶ. 1514 ರಿಂದ 1546ರವರೆಗೆ ಕೆಳದಿ ರಾಜ್ಯವನ್ನಾಳಿದ ಸದಾಶಿವನಾಯಕ ದಕ್ಷ ಸೇನಾಪತಿ. ಬಿಜಾಪುರ-ಅಹಮ್ಮದ್‌ನಗರ ಮೊದಲುಗೊಂಡು ದಕ್ಷಿಣ ಭಾರತದ ಪ್ರಬಲ ಅರಸರು ಈತನ ಪರಾಕ್ರಮದಿಂದ ಕಂಗೆಟ್ಟರು. ಬಿಜಾಪುರದ ಬಾರೀದ್‌ಷಹನನ್ನು ಬಂದಿಯನ್ನಾಗಿಸಿ ವಿಜಯನಗರಕ್ಕೆ ಸೆರೆಹಿಡಿದುಕೊಂಡು ಬಂದಿದ್ದುದು ಸದಾಶಿವನಿಗೆ 'ಶತ್ರು ಸಪ್ತಾಂಗ ಹರಣ' ಎಂಬ ಬಿರುದು ತಂದುವು. ಹಲವಾರು ಯುದ್ಧಗಳಲ್ಲಿ ಜಯಶಾಲಿಯಾದ ಈತನಿಗೆ ಎಡವ-ಮುರಾರಿ ಕೋಟೆಕೋಲಾಹಳ, ಬಲವಂತ, ಏಕಾಂಗವೀರ, ಮೇಘ-ಡಂಬರ ದಿವಾಪ್ರದೀಪ, ಪಡುವಣ ಸಮುದ್ರಾಧೀಶ್ವರ ರಾಯನಾಯಕ ಮುಂತಾದ ಬಿರುದುಗಳೂ ಬಾರೀದ ಪಾತುಶಾಹನ ಮುದ್ರೆಯುಂಗುರವೂ ಲಭಿಸಿದುವು. ಈತನು ಟಂಕಸಾಲೆ ನಿರ್ಮಿಸಿ ನಾಣ್ಯ ಚಲಾವಣೆ ಜಾರಿಗೆ ತಂದನು.[1]

## ಧಾರ್ಮಿಕ ಸಾಧನೆ

ಸದಾಶಿವನಾಯಕನು ಧಾರ್ಮಿಕ ಸಂಸ್ಥೆಗೆ ನೀಡಿದ ಪ್ರೋತ್ಸಾಹಗಳು ಗಮನಾರ್ಹ. ಅಗ್ರಹಾರ, ದೇವಾಲಯ ಹಾಗೂ ಕೆರೆಗಳು ಈತನ ಕಾಲದಲ್ಲಿ ನಿರ್ಮಾಣಗೊಂಡವು.

---

* ಕೆಳದಿ ಐತಿಹಾಸಿಕ ನಿಬಂಧಗಳು : ಸಂ. ಡಾ|| ಜಿ. ಎಸ್. ದೀಕ್ಷಿತ್, ಕೆಳದಿ ಇತಿಹಾಸ ಸಂಶೋಧನಾಲಯ–1989 (ಡಾ|| ಬಿ. ಆರ್. ಗೋಪಾಲ್‌ರವರ ಲೇಖನ)

1. ಭದ್ರಾವತಿಯಲ್ಲಿ ಸದಾಶಿವನಾಯಕನ ಚಿನ್ನದ ನಾಣ್ಯ ಲಭಿಸಿರುವುದನ್ನು ಪ್ರಜಾವಾಣಿ 7–8–90ರ ದಿನಪತ್ರಿಕೆ ನೋಡಿರಿ.

"ವಿಶುದ್ಧ ವೈದಿಕಾದ್ವೈತ ಸಿದ್ಧಾಂತ ಪ್ರತಿಷ್ಠಾಪಕ" ನೆಂದು ಬಿರುದು ಪಡೆದ ಈ ಅರಸನು ಜಂಗಮರಿಗೆ ಹೇರಳ ಭೂಸ್ವಾಸ್ಥೆಯಿತ್ತು. ಕುಶಾವತೀ ನದಿ ತೀರದಲ್ಲಿ ಸದಾಶಿವ ಪುರ ಎಂಬ ಅಗ್ರಹಾರ ಸ್ಥಾಪಿಸಿದನು. ಇಕ್ಕೇರಿಯ ಈಶ್ವರಗುಡಿ, ಕೆಳದಿ ಶ್ರೀ ರಾಮೇಶ್ವರ ಗುಡಿಯ ನಂದಿಮಂಟಪ ಈತನ ಕಾಲದಲ್ಲಿ ನಿರ್ಮಾಣಗೊಂಡುವು. ಈತನು ಕೆಳದಿ ಶ್ರೀರಾಮೇಶ್ವರ ದೇವರಿಗೆ ಹೇರಳ ಭೂಸ್ವಾಸ್ಥೆ ನೀಡಿ,[1] ಸದಾಶಿವಪುರ ಅಗ್ರಹಾರ ದಲ್ಲಿ ಹೂವಿನ ಹಂಪಯ್ಯ ನಿರ್ಮಿತ ಮಹಂತಮಠ, ಕುಕ್ಕೆ ಸುಬ್ರಹ್ಮಣ್ಯ, ಆಲಹಳ್ಳಿಯ ಮಲ್ಲಿನಾಥದೇವರಿಗೆ ಭೂಮಿಯನ್ನು ಉಂಬಳಿಯಾಗಿತ್ತನು.

ಕವಿ ಲಿಂಗಣ್ಣನ ಉಲ್ಲೇಖದಂತೆ—

ಭೀಮಂ ಸಂಗರದೊಳ್ಸ
ತ್ರಾಮಂ ಭೋಗದೊಳ್ ಶಾಂತಿಗುಣದೊಳೋಸ್ವಮಂ
ರಾಮಂ ನನ್ನಿಯೊಳೆಂದೀ
ಭೂಮಿಜನಂ ಪೊಗಳೆ ಬಾಳ್ದನಾ ನರನಾಥಂ ।

ಎಂಬುದಾಗಿ ದಕ್ಷಿಣ ಭಾರತದಲ್ಲಿಯೇ ಪ್ರಖ್ಯಾತ ಅರಸನಾಗಿದ್ದನು.

## ದೊಡ್ಡಸಂಕಣ್ಣನಾಯಕ (1545-1558)

ಸದಾಶಿವನ ಮರಣಾನಂತರ ದೊಡ್ಡಸಂಕಣ್ಣನು 1545ರಲ್ಲಿ ಅಧಿಕಾರಕ್ಕೆ ಬಂದನು ವಿಜಯನಗರ ಚಕ್ರವರ್ತಿಯ ಸೂಚನೆಯಂತೆ ವಿಠಲರಾಯನೊಂದಿಗೆ ಪೋರ್ಚುಗೀಸರನ್ನು ಸೋಲಿಸಿ ಗೋವೆಯ ರಾಜ್ಯಪಾಲನನ್ನು ಸೆರೆಹಿಡಿದು ರಾಯನಿಗೊಪ್ಪಿಸಿದನು.[2] ಹರ್ಷ ಗೊಂಡ ರಾಯನು 'ಭುಜಕೀರ್ತಿ'ಎಂಬ ಬಿರುದನ್ನಿತ್ತು ವಜ್ರವೈಢೂರ್ಯಗಳೊಂದಿಗೆ ಮಹದೇವಪುರ ಗ್ರಾಮವನ್ನು ಬಳುವಳಿಯಾಗಿತ್ತನು. ಕಾರ್ಕಳದ ಭೈರರಸು, ಗೇರು ಸೊಪ್ಪೆಯ ಭೈರಾದೇವಿ ಈತನಿಗೆ ಪ್ರೇಗದಿ ಸಲ್ಲಿಸುತ್ತಿದ್ದರು.

## ದೆಹಲಿಯ ಅಂಕುಶಖಾನನನ್ನು ಸೋಲಿಸಿದ್ದು

ದೊಡ್ಡ ಸಂಕಣ್ಣನು ವೈರಾಗ್ಯಶೀಲನಾಗಿದ್ದು ಜಂಗಮಧಾರಿಯಾಗಿ ಉತ್ತರ ದೇಶದಲ್ಲಿ ತೀರ್ಥಯಾತ್ರೆ ಕೈಗೊಂಡನು. ದೆಹಲಿ ಬಾದಷಹನಲ್ಲಿದ್ದ ಅಂಕುಶಖಾನನನ್ನು ಖಡ್ಗಯುದ್ಧದಲ್ಲಿ ಕೊಂದುಹಾಕಿದನು[3]. ಬಾದಷಹನಿಗೆ ಖಾನನು ಕಂಟಕಪ್ರಾಯ ನಾಗಿದ್ದರಿಂದ ಅವನ ಪತನವು ನಾಯಕನಿಗೆ ವಿಶೇಷ ಗೌರವವನ್ನು ತಂದಿತು. ನಾಯ

---

1. ಇತ್ತೀಚಿನವರೆಗೂ ಇದ್ದ ಭೂಮಿಯು ರೈತರ ಪಾಲಾಗಿ ತಸದೀಕು ಬರುತ್ತಿದೆ.
2. ಡಾ|| ಬಿ. ಎಸ್. ಶಾಸ್ತ್ರಿಯವರ ಅಭಿಪ್ರಾಯದಂತೆ ಪೋರ್ಚುಗೀಸ್ ದಾಖಲೆಗಳು ಇದನ್ನು ಸಮರ್ಥಿಸಲು ಸಹಕಾರ ನೀಡುತ್ತವೆ.
3. ಆ ಕಾಲದ ಕತ್ತಿವರಸೆ ಕುರಿತು ಕೆಳದಿ ನೃಪವಿಜಯ ಹಾಗೂ ಎಂ. ಎಸ್. ಪುಟ್ಟಣ್ಣನವರ ಕೃತಿಗಳಲ್ಲಿ ವಿವರಣೆಗಳಿವೆ.

ಕನು ದೆಹಲಿಯಲ್ಲಿ "ಚಾವಲಿಕೆ ಮಂಡ್ಯೈ" ಎಂಬೆಡೆ ಮಠವನ್ನು ಸ್ಥಾಪಿಸಿ, ಧಾರೆಯೆರೆದು ಕಾಶಿ-ಪ್ರಯಾಗಗಳನ್ನು ಸಂದರ್ಶಿಸಿದನು. ಕಾಶಿಯಲ್ಲಿ ಕಪಿಲಧಾರಾತೀರ್ಥ, ವೃಷಭಧ್ವಜೇಶ್ವರ ಮುಂತಾದ ತೀರ್ಥ ಹಾಗೂ ದೇವಾಲಯಗಳನ್ನು ಜೀರ್ಣೋದ್ಧರಿಸಿ, ಜಂಗಮವಾಡಿ ಮಠಕ್ಕೆ ಜಂಗಮಪುರ ಗ್ರಾಮವನಿತ್ತು ಶಾಸನ ಬರೆಸಿದನು.[1] ಉತ್ತರ ಭಾರತದಲ್ಲಿ ಈಗಲೂ ಇರುವ ಈ ಸಾಧನಗಳು ಕೆಳದಿ ಅರಸರ ಮಹತ್ವಾಕಾಂಕ್ಷೆಯನ್ನು ಸಾರುತ್ತವೆ.

ಔರಂಗಾಬಾದಿನ ಸಮೀಪ ಪೈಠಾಣದಿಂದ ತಂದ ವೀರಭದ್ರಮೂರ್ತಿ ಕೆಳದಿಯಲ್ಲಿಯೂ, ಅಘೋರೇಶ್ವರಮೂರ್ತಿ ಹಾಗೂ ಬೃಹತ್ ದೇವಾಲಯ ಇಕ್ಕೇರಿಯಲ್ಲಿಯೂ ಈತನ ಕಾಲದಲ್ಲಿ ನಿರ್ಮಾಣಗೊಂಡುವು.

## ಚಿಕ್ಕಸಂಕಣ್ಣನಾಯಕ (1559-1571)

ದೊಡ್ಡಸಂಕಣ್ಣನ ತರುವಾಯ ಚಿಕ್ಕಸಂಕಣ್ಣ ಪಟ್ಟವೇರಿದನು. ಕೆಳದಿಗೆ ಆಕ್ರಮಿಸಲು ತೊಡಗಿದ ಬಿಜಾಪುರದ ಸಲಭತ್‌ಖಾನ್, ಸೋದೆ ಅರಸಪ್ಪನಾಯಕ, ಭೈರಾದೇವಿ ಮುಂತಾದವರನ್ನು ಈತನು ಸೋಲಿಸಿ ಉಡುಗಣಿ ಕೋಟೆಯನ್ನು ವಶಪಡಿಸಿಕೊಂಡನು. 1565ರಲ್ಲಿನ ರಕ್ಕಸತಂಗಡಿ ಯುದ್ಧವು ಈತನ ಕಾಲದಲ್ಲಿಯೇ ಜರುಗಿತು. ಈ ಸಲುವಾಗಿ ಚಿಕ್ಕಸಂಕಣ್ಣನೂ ವಿಜಯನಗರಕ್ಕೆ ಹೋಗಿದ್ದನೆಂದು ದಾಖಲೆಗಳು ಹೇಳುತ್ತವೆ.[2] ಅಲ್ಲಿಂದ ರಕ್ಷಣೆಗಾಗಿ ಓಡಿಬಂದ ಚಿನ್ನಭಂಡಾರದ ನಾರಣಪ್ಪ ಆದಿಯಾಗಿ ವಿಜಯನಗರದ ಅಧಿಕಾರಿಗಳು ಆಶ್ರಯಬೇಡಿ ಕೆಳದಿ ಸರಕಾರದಲ್ಲಿ ಉದ್ಯೋಗಕ್ಕೆ ಸೇರಿಕೊಂಡರು. ತದನಂತರ ಕೆಳದಿ ಸ್ವತಂತ್ರವಾಯಿತು. ಚಿಕ್ಕಸಂಕಣ್ಣನ ತರುವಾಯ 1572 ರಿಂದ 1583ರವರೆಗೆ ರಾಮರಾಜ ನಾಯಕನು ಅಧಿಕಾರ ನಡೆಸಿದನು.

---

1. ದಿ. 7-3-1990 ರಂದು ನಾನು ಬೆನಾರೆಸ್‌ನಲ್ಲಿದ್ದಾಗ ಇವನ್ನು ಅವಲೋಕಿಸಿದ್ದೇನೆ. ಈ ಕುರಿತು 21-7-1991ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಡಾ|| ಶಿವಾನಂದರ ಲೇಖನ ಹಾಗೂ ಛಾಯಾಚಿತ್ರ ಅವಲೋಕಿಸಬಹುದು.
2. ಕೆ. ನೃ. ವಿ. ನಲ್ಲಿರುವ ವಿಜಯನಗರ ಅಂತ್ಯ ಸಂಗತಿಗೂ, ಮುಸ್ಲಿಂ ಇತಿಹಾಸಗಳಿಗೂ ಭಿನ್ನಾಭಿಪ್ರಾಯವಿದ್ದು ಕೆ. ನೃ. ವಿ. ನಲ್ಲಿ ಹೇಳಿದ ಅಂಶ ಸಂಶೋಧನಾರ್ಹವಾಗಿದೆಯೆಂದು ಡಾ|| ಸುಂದರರವರ ಅಭಿಪ್ರಾಯ.

## ಹಿರಿಯ ವೆಂಕಟಪ್ಪನಾಯಕ (1583-1629)

ರಾಮರಾಜನ ಅನಂತರ ಹಿರಿಯ ವೆಂಕಟಪ್ಪನಾಯಕ ಅಧಿಕಾರಕ್ಕೆ ಬಂದನು. ಈತನು ಬಿಜಾಪುರದವರನ್ನು[1] ಎದುರಿಸಿ, ಉಳ್ಳಾಲರು, ಬಂಗರಾಜ, ಭೈರಾದೇವಿಯವರನ್ನು ಸೋಲಿಸಿ, ಹೊಳೆಹೊನ್ನೂರು ಹನುಮ-ಮಂಜುಳಾಖಾನ್, ಬಲ್ಲಾಳರು, ಬಸವಾಪಟ್ಟಣ, ಹಾನಗಲ್ ಪ್ರಾಂತಗಳನ್ನು ಗೆದ್ದುಕೊಂಡನು. ಕವಿ ಲಿಂಗಣ್ಣನು ಉಕ್ತಿಸಿದಂತೆ—

ಕಡುಗಲಿಗಳನಿಸುವಗ್ಗದ
ಕೊಡಗರನೊಳಗೆನಿಸಿ ಸಾರ್ದುಗೋರಾಷ್ಪದ ನಾ
ಲ್ಗಡೆಯಂ ಸಾಧಿಸಿ ಪಡುಗಡ
ಲೊಡೆಯಂ ತಾನೆನಿಸಿ ವೆಂಕಟೋರ್ವಿಪನೆಸೆದಂ ॥

ಎಂಬಂತೆ ಕಡಲುಗಳ್ಳರಾದ ಪೋರ್ಚುಗೀಸರನ್ನು ಜಯಿಸಿ.[2] ಪಶ್ಚಿಮ ಸಮುದ್ರಾಧೀಶ್ವರನಾಗಿ ಆಳಿದನು. ಈಗಿನ ಐದು ಜಿಲ್ಲೆಗಳಷ್ಟು ವಿಸ್ತಾರವಾದ ರಾಜ್ಯವು ಈತನ ಅಧೀನದಲ್ಲಿತ್ತು. ಕೇರಳ ಪ್ರಾಂತದ ಹಲವು ಪ್ರದೇಶಗಳೂ ಈತನ ಅಧೀನ ಕ್ಕೊಳಪಟ್ಟಿದ್ದುದನ್ನು ಪೋರ್ಚುಗೀಸ್ ದಾಖಲೆಗಳು ಉಲ್ಲೇಖಿಸುತ್ತವೆ[3]

## ಇಟಲಿ ಪ್ರವಾಸಿ ಉಲ್ಲೇಖಿಸಿದ ಕೆಳದಿಯ ಸಾಮಾಜಿಕ ಸ್ಥಿತಿ

ಈತನ ಕಾಲದಲ್ಲಿ ದಿ. 29-10-1623ರಲ್ಲಿ ಇಟಲಿಯ ಪ್ರವಾಸಿ ಪಿಯತ್ರೋ ಡೆಲ್ಲವಲ್ಲೆ ಕೆಳದಿ ರಾಜ್ಯ ಹಾಗೂ ಅರಮನೆಗೆ ಸಂದರ್ಶನವಿತ್ತು ಆ ಕಾಲದ ಸಾಮಾಜಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಸ್ಥಿತಿಗಳನ್ನು ವರ್ಣಿಸಿದ್ದಾನೆ. ಲೇಖನ ವಿಸ್ತಾರ ಭಯದಿಂದ ಒಂದೆರಡು ಮಾದರಿ ನೀಡಲಾಗಿದೆ.

**ರಸ್ತೆ :** ಮಾರ್ಗವು ಬಹು ಅಗಲವಾಗಿದ್ದು ಇಕ್ಕಡೆಗಳಲ್ಲಿಯೂ ತಂಪಾದ ನೆರಳು ಗಳನ್ನೊಳಗೊಂಡ ವೃಕ್ಷಗಳ ಸಾಲು ಮನಮೋಹಕವಾಗಿವೆ. ದಾರಿಯಲ್ಲಿರುವ ಕೊಳಗಳು ಮರದ ನೆರಳುಗಳು ಪ್ರಯಾಣಿಕರಿಗೆ ಮಾರ್ಗಾಯಾಸವಿಲ್ಲದೆ ದಣಿವಾರಿಸುವಂತೆ ಮಾಡುತ್ತವೆ.

**ದೇವಾಲಯದ ಧಾರ್ಮಿಕ ಉತ್ಸವ :** ಅಲಂಕೃತ ಪಲ್ಲಕ್ಕಿಯಲ್ಲಿ ದೇವರ ಮೂರ್ತಿಯನ್ನಿರಿಸಿ ಮೆರವಣಿಗೆ ಹೊರಡಿಸಿದರು. ದೇವಸ್ಥಾನದ ಪುರೋಹಿತರು,

---

1. ಬಿಜಾಪುರದ ಶ್ರೀ ಜಾಗೀರ್‌ದಾರ್‌ರವರಿಗೆ ವಿಶ್ವವಿದ್ಯಾಲಯದಲ್ಲಿ ಸಾದರಪಡಿಸುವ ಮಹಾಪ್ರಬಂಧಕ್ಕೆ ಈ ಕುರಿತು ಮಾರ್ಗದರ್ಶನ ನೀಡಿರುವೆನು.
2. Bulhao-Pato : Documentos I P. 74.
3. Pyard-de-Laval : Travels, I pp 344-45 (Dr. B. S. Shastry, Goa.)

ಸ್ತ್ರೀಪುರುಷರು ಬಹು ದೊಡ್ಡ ಸಂಖ್ಯೆಯಲ್ಲಿ ಪಾಲ್ಗೊಂಡಿದ್ದಾರೆ. ನೃತ್ಯ, ಸಂಗೀತ, ಹಗಲು ದೀವಟಿಗೆಗಳೊಂದಿಗೆ ಪಲ್ಲಕ್ಕಿಯನ್ನು ನಗರದ ಪ್ರಮುಖ ಬೀದಿಗಳಲ್ಲಿ ಮೆರೆಸಿದರು. ಅಂತ್ಯದಲ್ಲಿ ದೇವರ ಮೂರ್ತಿಯನ್ನು ಮರಳಿ ದೇಗುಲಕ್ಕೆ ತಂದು ವಿಧಿಪೂರ್ವಕ ಯಥಾ ಸ್ಥಾನದಲ್ಲಿರಿಸಿದರು.

ಹೀಗೆಯೇ ಆ ಕಾಲದ ವಿದ್ಯಾಭ್ಯಾಸ ಹಾಗೂ ವಾಣಿಜ್ಯೋದ್ಯಮದಲ್ಲಿ ಸಾಧಿಸಿದ ಪ್ರಗತಿಯನ್ನು ಡೆಲ್ಲವಲ್ಲೆಯು ಅಪಾರವಾಗಿ ವರ್ಣಿಸಿರುವನು.[1]

## ಧರ್ಮ, ಕಲೆ-ಸಾಹಿತ್ಯ

ಇಕ್ಕೇರಿಯ 'ಅಘೋರೇಶ್ವರ' ಗುಡಿ ಹಾಗೂ ಶೃಂಗೇರಿ ಮಠ ಈತನ ಕಾಲದಲ್ಲಿ ಜೀರ್ಣೋದ್ಧಾರ ಕಂಡವು. "ವಿಶುದ್ಧ ವೈದಿಕಾದ್ವೈತ ಸಿದ್ಧಾಂತ" ಮತ್ತು "ಶೃಂಗೇರಿ ಪುನಃ ಪ್ರತಿಷ್ಠಾಪಕ" ಎಂಬ ಬಿರುದು ಈತನಿಗಿತ್ತು. ಭುವನಗಿರಿ ದುರ್ಗದ ವಿಶ್ವೇಶ್ವರ, ಅಂತರಸಿಪುರದ ತಾಂಡವೇಶ್ವರ, ರಂಗನಾಥ, ಸಾಗರದ ಮಹಾಗಣಪತಿ, ಕೆಳದಿ ರಾಮೇಶ್ವರ, ಮಂಗಳೂರು ಕೋಟೀಶ್ವರ ದೇವಾಲಯಗಳೂ, ಸದಾಶಿವಪುರ, ವಿಶ್ವನಾಥ ಪುರ ಅಗ್ರಹಾರಗಳೂ ಜಂಗಮ ಮಠಗಳೂ ನಿರ್ಮಾಣಗೊಂಡವು. ಈತನು ಇಸ್ಲಾಂ ಧರ್ಮದ ಮಸೀದಿ ನಿರ್ಮಿಸಿರುವುದು ಗಮನಾರ್ಹ.[2] ಮತೀಯ ದ್ವೇಷವಿಲ್ಲದೆ ಪ್ರಜೆಗಳ ರಕ್ಷಣೆಯಲ್ಲಿ ಈತನನ್ನು ಕುರಿತು ಶಿವಮೊಗ್ಗದ ಶಾಸನಗಳು ವರ್ಣಿಸಿವೆ. ಕೊಲ್ಲೂರು ಮೂಕಾಂಬೆ ದೇವಾಲಯ ಜೀರ್ಣೋದ್ಧಾರ ಹಾಗೂ ದ್ವಾರಪಾಲಕ ಕಂಚಿನ ಮೂರ್ತಿಗಳು ಈ ನಾಯಕನ ಕೊಡುಗೆಗಳು. ಆನಂದಪುರದ ಮಹತ್ತಿನಮಠಕ್ಕೆ 196½ ವರಹ ರೆವಿನ್ಯೂ ಆದಾಯವುಳ್ಳ ಆರಗದ ವೆಂಠೆಯಲ್ಲಿ ಮಸರೂರು ಸೀಮೆಯಲ್ಲಿರುವ 'ಬೈರ' ಗ್ರಾಮವನ್ನು ಈ ನಾಯಕನು ಉಂಬಳಿಯಾಗಿತ್ತನು. ಶ್ರೀರಂಗಪಟ್ಟಣದ ಹಿರಿಯ ಹಂಪಯ್ಯ ನಿರ್ಮಿತ ಸಾಗರದ ಮಠವೊಂದಕ್ಕೆ ಕಡೇನಹಳ್ಳಿ ಗ್ರಾಮವನ್ನಿತ್ತನು.

ಈ ಅರಸನು ಕೌಲೇದುರ್ಗವನ್ನು ಅಭಿವೃದ್ಧಿಪಡಿಸಿ, ಅರಮನೆ, ಟಂಕಸಾಲೆ, ಉಗ್ರಾಣ, ಆನೆ ಮತ್ತು ಕುದುರೆ ಲಾಯಗಳು. ಸರೋವರ, ಹೂದೋಟ ಅಗ್ರಹಾರ ಮಹತ್ತಿನ ಮಠಗಳನ್ನು ನಿರ್ಮಿಸಿದನು. ಕೋಟೆಯ ಹೊರಭಾಗದಲ್ಲಿ ಸುಂದರವಾದ ಬೆಟ್ಟದರಮನೆ ಹಾಗೂ ಕಲ್ಯಾಣ ಮಹಲನ್ನು ಸ್ಥಾಪಿಸಿದನು.[3]

---

1. ಇಕ್ಕೇರಿಯ ಐತಿಹಾಸಿಕ ಹಿನ್ನೆಲೆ ಕೃತಿ ನೋಡಿರಿ,
2. ಈ ಸಂಬಂಧದ ತಾಮ್ರಶಾಸನ ಕೆಳದಿ ಸಂಶೋಧನಾಲಯದಲ್ಲಿದೆ.
3. ಆಗುಂಬೆ ಸೂರ್ಯಾಸ್ತಮಾನದಷ್ಟೇ ವೀಕ್ಷಣೆಗೆ ಪ್ರಖ್ಯಾತವಾದ ಈ ತಾಣ ಹಾಗೂ ಇಲ್ಲಿಯ ಅವಶೇಷಗಳನ್ನು ರಕ್ಷಿಸಿ ಪ್ರವಾಸೀ ಕೇಂದ್ರವಾಗಿ ಅಭಿವೃದ್ಧಿಪಡಿಸಲು ಇಲ್ಲಿ ವಿಪುಲ ಅವಕಾಶಗಳಿವೆ. ಡಾ|| ರಘುನಾಥಭಟ್ಟರ ಸೂಚನೆಯಂತೆ ಮೈಸೂರಿನ ಶ್ರೀಮತಿ ಸುಭದ್ರ ಸಿದ್ಧಪಡಿಸುತ್ತಿರುವ 'ಕೆಳದಿ ಅರಸರ ಕಲೆ' ಮಹಾಪ್ರಬಂಧಕ್ಕೆ ಮಾರ್ಗದರ್ಶನ ನೀಡಿರುವೆನು.

ವಿದ್ಯಾಪಕ್ಷಪಾತಿಯಾಗಿದ್ದ ಈ ಅರಸನು ಕಲೆ ಹಾಗೂ ಸಾಹಿತ್ಯಗಳಿಗೆ ವಿಪುಲ ಪ್ರೋತ್ಸಾಹವಿತ್ತನು. ಶಿವಗೀತೆ, ಶಿವಾಷ್ಟಪದಿ, ತಂತ್ರಸಾರ, ಮಾನಪ್ರಿಯ, ಕಾಶಿಯ ಭಟ್ಟೋಜೀ ದೀಕ್ಷಿತ ತತ್ವಕೌಸ್ತುಭ.[1] ಮುಂತಾದ ಉದ್ಗ್ರಂಥಗಳು ಬೆಳಕು ಕಂಡುವು. ಆಗಾಗ್ಯೆ ವಿದ್ವತ್ ಸಭೆ ಜರುಗುತ್ತಿದ್ದ ಈತನ ಆಸ್ಥಾನವು ವಿಶ್ವವಿದ್ಯಾಲಯದೋಪಾದಿಯಲ್ಲಿತ್ತು. ಈತನು ನಾಟ್ಯಶಾಲೆಯೊಂದನ್ನೂ ನಿರ್ಮಿಸಿದನು. ಶಿವಮೊಗ್ಗದ ಶಾಸನವೊಂದು "ಭೋಜಃ ಸತ್ಕವಿ ಸಂತತೇರ್ವರಗುಣಃ ಶ್ರೀ ವೇಂಕಟಕ್ಷ್ಮಾಪತಿಃ" ಎಂದು ವರ್ಣಿಸಿದೆ.

## ವೀರಭದ್ರನಾಯಕ (162?–1645)

ಹಿರಿಯ ವೆಂಕಟಪ್ಪನಾಯಕನ ಅನಂತರ ವೀರಭದ್ರನಾಯಕನು ಅಧಿಕಾರಕ್ಕೆ ಬಂದನು. ಇವನ ಆಳ್ವಿಕೆಯುದ್ದಕ್ಕೂ ರಾಜ್ಯದ ಐಕ್ಯತೆಗೆ ಆಂತರಿಕ ಬಾಹ್ಯ ಶತ್ರುಗಳೊಂದಿಗೆ ಹೋರಾಡಬೇಕಾಯಿತು. ವಿಜಾಪುರದ ರಣದುಲ್ಲಾ ಖಾನನನ್ನು ತಡೆದು ಈತನು ರಾಜ್ಯವನ್ನು ರಕ್ಷಿಸಿದನು. ಸೋದೆ, ಬಿಳಿಗಿ, ಕಾರ್ಕಳವನ್ನು ಸ್ವಾಧೀನಪಡಿಸಿಕೊಂಡು, ದಂಗೆಯೆದ್ದ ಚಿಕ್ಕಪುಟ್ಟ ಪಾಳೆಯಗಾರರು ಹಾಗೂ ಅರಮನೆಯ ಯಾದವೀ ಕಲಹಗಳನ್ನು ಶಿವಪ್ಪನಾಯಕನ ಸಹಾಯದಿಂದ ಎದುರಿಸಿ ರಾಜ್ಯದ ಐಕ್ಯತೆಯನ್ನು ಕಾಪಾಡಿದನು. 1638ರಲ್ಲಿ ರಣದುಲ್ಲಾ ಖಾನನು ರಾಜಧಾನಿಗೆ ಧಾಳಿ ನಡೆಸಿ ಹಾವಳಿಯನ್ನೆಸಗಿದ್ದರಿಂದ ಇಕ್ಕೇರಿಯಿಂದ ಬಿದನೂರಿಗೆ ರಾಜಧಾನಿಯನ್ನು ಬದಲಾಯಿಸಬೇಕಾಯಿತು. ಕಳಸದ ಭೈರವನಾಯಕನು ಶೃಂಗೇರಿಯ [illegible] ಧಾಳಿ ನಡೆಸಿ ಅಪಾರ ಸಂಪತ್ತನ್ನು ದೋಚಿದ್ದರಿಂದ ವೀರಭದ್ರನು ಅವನನ್ನು ಹಿಮ್ಮೆಟ್ಟಿಸಿ ದೇವಾಲಯ-ಮಠವನ್ನು ರಕ್ಷಿಸಿದನು. ಈತನ ಸ್ಮರಣಾರ್ಥವಾಗಿ ಗುರುಗಳು "ರಾಮಚಂದ್ರ ಮಹೋದಯ" ಕಾವ್ಯ ರಚಿಸಿದರು.[2]

ಪ್ರಮುಖ ವಾಣಿಜ್ಯೋದ್ಯಮ ಮೆಣಸಿನಕಾಳಿನ ವ್ಯವಹಾರದಲ್ಲಿ ವಿದೇಶೀಯರೊಂದಿಗೆ ಕೆಳದಿಯು ಪ್ರಮುಖ ಪಾತ್ರವಹಿಸಿತು. ಈ ದಿಸೆಯಲ್ಲಿ ಪೋರ್ಚುಗೀಸ್ ವೈಸ್‌ರಾಯ್ ಪೆಡ್ರೋಡಿ ಸಿಲ್ವಾ, ಮಾರ್ಟಿನ್ ಟೀಕ್ಸೆರಾ ಹಾಗೂ ಈಸ್ಟ್ ಇಂಡಿಯಾ ಕಂಪನಿಯು ವೀರಭದ್ರನಾಯಕನೊಂದಿಗೆ ನಡೆಸಿದ ಪತ್ರವ್ಯವಹಾರಗಳು ಗಮನಾರ್ಹವಾದವುಗಳು. ಈ ಕುರಿತು ಒಪ್ಪಂದಕ್ಕೆ ಇಂಗ್ಲೀಷರ ನಾಯಕ ಕ್ಯಾಪ್ಟನ್ ವೆಡೆಲ್ ಹಾಗೂ ರಾಬಿನ್‌ಸ್ನ

1. ಭಟ್ಟೋಜೀ ದೀಕ್ಷಿತನ ಅಪ್ರಕಟಿತ ಓಲೆಗರಿ ಹಸ್ತಪ್ರತಿಯೊಂದು ಈಚೆಗೆ ಕೆಳದಿ ಸಂಶೋಧನಾಲಯದಲ್ಲಿ ಪತ್ತೆಯಾಗಿದ್ದು ಅಸಿಸ್ಟೆಂಟ್ ಕ್ಯುರೇಟರ್ ಶ್ರೀ ಕಲ್ಲಾಪುರ್ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಲಿರುವ ಸಂಪ್ರಬಂಧಕ್ಕೆ ಮಾರ್ಗದರ್ಶನ ನೀಡಿರುವೆನು.
2. ಇದರ ಕುರಿತು ಸಂಶೋಧನೆ ನಡೆಸಿರುವೆನು.

ಮುಂತಾದ ಉನ್ನತ ಅಧಿಕಾರಿಗಳು ಇಕ್ಕೇರಿಗೆ ಭೇಟಿಯಿತ್ತರು. ಇದರ ಪ್ರಕಾರ ಕೆಳದಿ ಅರಸನು ಅಂತೋನಿ ವರೆವರ್ದಿಗೆ ಭಟಕಳದಲ್ಲಿ ಕಾರ್ಖಾನೆ ತೆರೆಯಲು ಅನುಮತಿಯಿತ್ತನು. ಇಂತಹ ಪೋರ್ಚುಗೀಸ್, ಡಚ್ ಚಾರಿತ್ರಿಕ ದಾಖಲೆಗಳು, ವೀರಭದ್ರ ನಾಯಕನ ಸಹಿಯಿರುವ ಪತ್ರ ಮುಂತಾದವು ಲಂಡನ್‌ನಲ್ಲಿವೆ.[1]

ಕೆಳದಿ ಅರಮನೆಯ ಆಡಳಿತ ಕಛೇರಿಯಲ್ಲಿರುವ ಪತ್ರಾಗಾರ ಇಲಾಖೆಯನ್ನು ಕುರಿತು 1637ರಲ್ಲಿ ವೀರಭದ್ರನಾಯಕನ ಕಾಲದಲ್ಲಿ ಭೇಟಿಯಿತ್ತು ಉಲ್ಲೇಖಿಸಿದ ಇಂಗ್ಲೆಂಡಿನ ಪೀಟರ್ ಮುಂಡಿಯ ಪ್ರವಾಸಿ ಕಥನವು ಗಮನಾರ್ಹವಾದುದು. ಮಾದರಿಯೊಂದನ್ನು ನೀಡಲಾಗಿದೆ:

,'At my beeing, at Eccary, I was at the kings secretaries, where in his home, I saw many hundreds (I may say thousands) of those written palm leaves being very long and narrow, handsomely rouled uppe, those againe tied into bundles hung upp in order about his romme or office soe that hee may be styled master of the roules'',

## ಶಿವಪ್ಪನಾಯಕ (1645-1660)

೧೬೪೫ರಲ್ಲಿ ಪಟ್ಟವೇರಿದ ಕೆಳದಿ ಶಿವಪ್ಪನಾಯಕನು ದಕ್ಷಿಣ ಭಾರತದಲ್ಲಿಯೇ ಸಮರ್ಥದೊರೆ. ಈತನ ಕಾಲದಲ್ಲಿ ಕೆಳದಿರಾಜ್ಯ ಉತ್ತರದಲ್ಲಿ ಕಾರವಾರ-ಅಂಕೋಲ, ದಕ್ಷಿಣದಲ್ಲಿ ಕೇರಳದ ಬಿಲಯಾಪಟಮ್ ವರೆಗೂ ಹಬ್ಬಿತು. ಕೇರಳದಲ್ಲಿರುವ ಶಿವಪ್ಪ ನಾಯಕನ ಬೇಕಲಕೋಟೆಯನ್ನು ಈಗಲೂ ಕಾಣಬಹುದು.[2] ವಿಜಯನಗರದಿಂದ ಓಡಿಬಂದ ಶ್ರೀರಂಗರಾಯನನ್ನು ನಾಯಕನು ಉದ್ಧರಿಸಿ, ಸಕ್ಕರೇಪಟ್ಟಣದ ಆಧಿಪತ್ಯವನ್ನು ವಹಿಸಿದನು. ಹಾಲೆಂಡ್ ಸರಕಾರವನ್ನು ತರಾಟೆಗೆ ತೆಗೆದುಕೊಂಡು ಪೋರ್ಚುಗೀಸ್ ಹಾಗೂ ಡಚ್ಚರನ್ನು ಗಡಿಯಿಂದಾಚೆಗೆ ಓಡಿಸಿದನು. 1–5–1649ರಲ್ಲಿ ಆ್ಯಂಟೋನಿಯೋ ಬೊರ್ಗೆಸ್ ಡಾ ಕೋಸ್ಟಾ ಪೋರ್ಚುಗೀಸ್ ಗೌರ್‍ನರನು ಶಿವಪ್ಪ ನಾಯಕನಲ್ಲಿಗೆ ಬಂದು ಆನೆಯನ್ನು ಕಾಣಿಕೆಯಾಗಿತ್ತನು. ದಳವಾಯಿ ಹಂಪವರ್‍ಯನನ್ನು ಸೆರೆಹಿಡಿದು ಮೈಸೂರಿನ ಒಡೆಯರನ್ನು ನಿಗ್ರಹಿಸಿದನು.

---

1. ಇಂತಹ ಚಾರಿತ್ರಿಕ ದಾಖಲೆಗಳಿರುವ Notions of the Reign, Instricoes, justricoes, Pazes-E-Tratados Jus Frucares ಮುಂತಾದ ಆಕರಗಳು ಸಂಶೋಧನೆಗೆ ಕಾಯುತ್ತಿವೆ.

## ಭೂಸುಧಾರಣೆ ಹಾಗೂ ಶಿವಪ್ಪನಾಯಕನ ಸಿಸ್ತು

ತನ್ನ ಭೂಮಿಯಲ್ಲಿಯೇ ಪ್ರಯೋಗಗಳನ್ನು ಕೈಗೊಂಡು, ಸಾಮಾನ್ಯ ರೈತರಿಗೂ ಅನ್ಯಾಯವಾಗದಂತೆ ಭೂಸುಧಾರಣೆಯನ್ನು ಜಾರಿಗೆ ತಂದ ಕೀರ್ತಿ ಕೆಳದಿ ಶಿವಪ್ಪ ನಾಯಕನಿಗೆ ಸಲ್ಲುತ್ತದೆ. "ಶಿವಪ್ಪನಾಯಕನ ಸಿಸ್ತು" ಎಂದು ಗಾದೆ ಮಾತಾಗಿರುವ ಈತನ ಸುಧಾರಣೆಯಿಂದ ಆ ಕಾಲದ ರೈತರ ನೆಮ್ಮದಿಯನ್ನು ಕುರಿತು 1618 ರಿಂದ 1763 ರವರೆಗಿನ ಸ್ಥಿತಿಯನ್ನು ವಿವರಿಸುತ್ತಾ ಸರಕಾರಕ್ಕೆ ರಬೇಕಾದ ಬಾಕಿಯೇ ಇರುತ್ತಿರಲಿಲ್ಲವೆಂಬುದನ್ನು ಬ್ರಿಟಿಷ್ ಸರ್ವೆ ಅಧಿಕಾರಿ ಮನ್ರೋ 5–5–1800ರಲ್ಲಿ ವೈಸರಾಯಿಗೆ ವರದಿಮಾಡಿ ಈ ರೀತಿ ಉಲ್ಲೇಖಿಸಿದ್ದಾನೆ :

"What was levied by Government would amount to 1/3 of he gross produce ; but it was taken only at a rough estimate of the seed sown and was considered light. The people are represented as happy and prosperous under it ; there were no outstanding balances........"

Whatever proportion the assessment might have borne to the gross produce in 1763 at the time of the conquest of Kanara by Hyder, it still seems to have been sufficiently moderate to have enabled the country........

ಇಂತಹ ಸಾಧನೆ ಈಗಿನ ರಾಜಕೀಯ ಹಾಗೂ ಕೃಷಿವಿಜ್ಞಾನಿಗಳಿಗೆ ಕಣ್ತೆರೆಸ ಬಹುದೇ ?

## ಕೆಳದಿ ಚೆನ್ನಮ್ಮಾಜಿ (1672–1698)

(ಹಿರಿಯ ಸೋಮಶೇಖರ ನಾಯಕ) (1664–1672)

ಶಿವಪ್ಪನಾಯಕನ ತರುವಾಯ 1661-62ರವರೆಗೆ ಕಿರಿಯ ವೆಂಕಟಪ್ಪನಾಯ ಕನೂ, 1662 ರಿಂದ1664ರವರೆಗೆ ಭದ್ರಪ್ಪನಾಯಕನೂ ರಾಜ್ಯವಾಳಿದರು. ಭದ್ರಪ್ಪ ನಾಯಕನ ತರುವಾಯ 1664ರಲ್ಲಿ ಹಿರಿಯ ಸೋಮಶೇಖರ ನಾಯಕನು ಪಟ್ಟವೇರಿ ದನು. ಈತನ ಕಾಲದಲ್ಲಿ ಪ್ರಸಿದ್ಧನಾದ ಶಿವಾಜಿಯು ಕೆಳದಿ ರಾಜ್ಯದಲ್ಲಿ ದಾಳಿಯನ್ನೆಸ ಗಿದ್ದನು. ಹಲವು ಪಿತೂರಿಗಳಿಂದ ಈ ನಾಯಕನು ದುರ್ಮರಣಕ್ಕೀಡಾಗಬೇಕಾಯಿತು. ರಾಜ್ಯದಲ್ಲಿ ಉಂಟಾದ ಅನಾಯಕತ್ವದಿಂದಾಗಿ ಈತನ ಪತ್ನಿ ಚೆನ್ನಮ್ಮಾಜಿಗೆ ಅಧಿಕಾರ ಲಭಿಸಿತು. ದಕ್ಷಳಾದ ಈಕೆಯು ಮೈಸೂರು ಹಾಗೂ ಬಿಜಾಪುರದವರನ್ನು ಸೋಲಿಸಿ ಹಿಂದಕ್ಕಟ್ಟಿದಳು.

## ಶಿವಾಜಿಯ ಮಗ ರಾಜಾರಾಮನನ್ನು ರಕ್ಷಿಸಿದ್ದು

ದೆಹಲಿಯ ಬಾದಷಹ ಔರಂಗಜೇಬನ ಉಪಟಳದಿಂದ ಓಡಿಬಂದ ಶಿವಾಜಿಯ ಮಗ ರಾಜಾರಾಮನು ರಕ್ಷಣೆಗಾಗಿ ರಾಣಿಯ ಮರೆಹೊಕ್ಕನು. 8–2–1665ರಂದು ತನ್ನ ಪತಿಯ ಕಾಲದಲ್ಲಿ ಶಿವಾಜಿಯು ರಾಜ್ಯದಲ್ಲಿ ಧಾಳಿ ನಡೆಸಿದ್ದು ಮನಸ್ಸಿನಲ್ಲಿ ವ್ಯಗ್ರ ಗೊಂಡಿದ್ದರೂ, ಅದನ್ನು ಗಣನೆಗೆ ತಾರದೆ ಶರಣಾಗತನಾಗಿ ಬಂದ ರಾಜಾರಾಮನಿಗೆ ಔರಂಗಜೇಬನನ್ನು ಎದುರಿಸಿ, ರಕ್ಷಣೆ ನೀಡಿದುದು ಗಮನಾರ್ಹ ಸಾಧನೆ. ಮಹಾರಾಷ್ಟ್ರದ ಇತಿಹಾಸಕಾರ ಶಿಜ್ವಾಲ್‌ಕರ್ ರಾಣಿಯ ಈ ಕೃತಿಯನ್ನು ಕೊಂಡಾಡಿ ಮಹಾರಾಷ್ಟ್ರೀಯರು ಕೆಳದಿಯ ರಾಣಿಗೆ ಕೃತಜ್ಞರಾಗಿರುವುದು ಆದ್ಯ ಕರ್ತವ್ಯವೆಂದು ಹೇಳಿದ್ದಾರೆ. ಕೆಳದಿ ರಾಜಧಾನಿ ನಗರದಲ್ಲಿ ರಾಜಾರಾಮ ನಿರ್ಮಿತ ಪಾರ್ವತೀ ಗುಡಿ ಹಾಗೂ ಕೆಳದಿ ಧ್ವಜಸ್ತಂಭದಲ್ಲಿರುವ ರಾಣಿ ಹಾಗೂ ರಾಜಾರಾಮನ ಶಿಲ್ಪವನ್ನು ಉಭಯ ಸರಕಾರಗಳೂ ಸೋದರಭಾವದಿಂದ ಮುಂದಿನ ಪೀಳಿಗೆಗೆ ಸಂರಕ್ಷಿಸುವುದು ಸೂಕ್ತ.

## ಧಾರ್ಮಿಕ – ಸಾಮಾಜಿಕ ನೀತಿ

ಚೆನ್ನಮ್ಮಾಜಿಯು ಸೋಮಶೇಖರಪುರ ಅಗ್ರಹಾರ ನಿರ್ಮಿಸಿ, ಶೃಂಗೇರಿ, ಗೋವಾ ಪರ್ತಗಾಳಿ ಹಾಗೂ ಅನೇಕ ಮಹತ್ತಿನ ಮಠಗಳಿಗೆ ಭೂಸ್ವಾಸ್ಥೆ ನೀಡಿದಳು. ಈಕೆಯ ಕಾಲದಲ್ಲಿ ಪ್ರಜೆಗಳ ನೆಮ್ಮದಿಯನ್ನು ಕುರಿತು ಡಾ|| ಫ್ರಾಯರನು ಪ್ರವಾಸಿ ಕಥನದಲ್ಲಿ– "The people had good laws and obeyed them and travelled without guides on broad roads not along byepaths as in Malabar" ಎಂದು ನುಡಿದಿರುವನು. ದತ್ತು ಮಗ ಬಸಪ್ಪನಾಯಕನಿಗೆ ಈ ರಾಣಿಯು ನೀಡಿದ ಉಪದೇಶವು ಆದರ್ಶಪ್ರಾಯವಾದುದು. ಚೆನ್ನಮ್ಮಾಜಿಯ ಸ್ಮಾರಕವನ್ನು ಸ್ಥಾಪಿಸಿ ಇದನ್ನು ಅಳವಡಿಸುವುದು ಸೂಕ್ತವಾದುದು. ಚೆನ್ನಮ್ಮಾಜಿಯು ಕಲಿಯುಗದಲ್ಲಿ ಆಶ್ರಿತರ ರಕ್ಷಣೆಗೆ ಯವನ ರಾಕ್ಷಸರನ್ನು ಸಂಹರಿಸುವ ಮೂಕಾಂಬೆಯ ಅವತಾರವೆಂದು ಶಿವತತ್ವರತ್ನಾಕರವು ಬಣ್ಣಿಸಿದೆ.

## ಹಿರಿಯ ಬಸಪ್ಪನಾಯಕ (1698–1715)

ಚೆನ್ನಮ್ಮಾಜಿಯ ತರುವಾಯ ಹಿರಿಯ ಬಸಪ್ಪನಾಯಕನಿಗೆ ಪಟ್ಟವಾಯಿತು. ಸಾಹಿತ್ಯಾಭಿವೃದ್ಧಿಯು ಈತನ ಕಾಲದಲ್ಲಿ ಪರಾಕಾಷ್ಠತೆಯನ್ನು ಹೊಂದಿತು. ವಿದ್ವಾಂಸರಿಂದ "ಸೂರಿನಿಕರ ಕಲ್ಪದ್ರುಮ" ಎಂದು ಬಿರುದಾಂಕಿತನಾದ ಈ ಅರಸನು ಸ್ವತಹ ವಿದ್ವಾಂಸನಾಗಿದ್ದು ಶಿವತತ್ವರತ್ನಾಕರ[1], ಸುಭಾಷಿತ ಸುರದ್ರುಮ ಕೃತಿ ರಚನೆ ಮಾಡಿದನು 'ಸುಭಾಷಿತ ಸುರದ್ರುಮ' ಪೂನಾದಲ್ಲಿದೆ.

---

1. Logan : A collection, pt I XXV pp 33-34

## ಇಮ್ಮಡಿ ಸೋಮಶೇಖರನಾಯಕ (1715–1740)

ಇಮ್ಮಡಿ ಸೋಮಶೇಖರನು 1715ರಲ್ಲಿ ಪಟ್ಟಕ್ಕೆ ಬಂದನು. 1725ರಲ್ಲಿ ದೆಹಲಿಯ ಬಾದಷಹನು ಈತನ ಸಹಾಯವನ್ನು ಯಾಚಿಸಿದ್ದರಿಂದ ತುಮಕೂರಿನ ಸೀರ್‍ಯದಲ್ಲಿ ಮೈಸೂರವರೊಂದಿಗೆ ಯುದ್ಧಕ್ಕೆ ಬಂದ ಮಿರ್ಜಾ ಆದಂಖಾನನನ್ನು ಓಡಿಸಿ ಅಲ್ಲಿ ತಾಯರಖಾನನನ್ನು ಅಧಿಕಾರದಲ್ಲಿರಿಸಿದನು. ಡಚ್, ಇಂಗ್ಲಿಷ್ ಮತ್ತು ಮಲಬಾರಿನವರು ಈತನಿಗೆ ಭಯಪಡುತ್ತಿದ್ದರು. ಈಗಿನ ಕೇರಳದ ಕಣ್ಣಾನೂರಿನವರೆಗೂ ಈತನ ರಾಜ್ಯವಿಸ್ತಾರವಿತ್ತು. ಈ ಕುರಿತು ಗಮನಾರ್ಹ ಚಾರಿತ್ರಿಕ ಮೂಲ ದಾಖಲೆಯೊಂದು ಈಗಲೂ ತಲಚೇರಿ ಹಾಗೂ ಬ್ರಿಟಿಷ್ ಮ್ಯೂಜಿಯಂನಲ್ಲಿದೆ[1]. ಮಹಾಜನ್ ವರದಿಗೆ ಇದು ಗೋಚರಿಸಿದ್ದಲ್ಲಿ ಕಣ್ಣಾನೂರು ಕರ್ನಾಟಕಕ್ಕೆ ಸೇರಲರ್ಹವಾಗಿತ್ತು ! (ಅನುಬಂಧ ನೋಡಿರಿ)

## ಧರ್ಮ ಮತ್ತು ಕಲೆ

ಈ ನಾಯಕನು ಕೊಲ್ಲೂರು ಆದಿಯಾಗಿ ತೀರ್ಥಯಾತ್ರೆ ಕೈಗೊಂಡು ದೇವರಿಗೆ ಭೂಸ್ವಾಸ್ಥೆ ಹಾಗೂ ಆಭರಣಗಳನ್ನು ನೀಡಿದನು.[1] ಈತನ ಕಾಲದಲ್ಲಿ ನಿರ್ಮಾಣಗೊಂಡ ಅರಮನೆಯು ಬಂಗಾರದ ತಗಡಿನಿಂದ ಕೂಡಿ ವೈವಿಧ್ಯಮಯವಾಗಿ ಕಂಗೊಳಿಸಿತ್ತೆಂದೂ, ದಸರಾ ವೈಭವದ ನಾಡಹಬ್ಬವೂ ಆಚರಣೆಯಲ್ಲಿತ್ತೆಂದೂ ವಿದೇಶೀಯ ಉಲ್ಲೇಖಗಳಿಂದ ವ್ಯಕ್ತಪಡುತ್ತದೆ. ಈತನ ಕಾಲದಲ್ಲಿದ್ದ ನಿರ್ವಾಣಯ್ಯನು (ಮಂತ್ರಿಯು) ಶಿವಪೂಜಾವಿಧಿ ಕೃತಿ ರಚನೆ ಮಾಡಿದನು.[2]

ತುಂಗಾ ನದಿಗೆ ಅಣೆಕಟ್ಟು ಈ ಅರಸನ ಕಾಲದಲ್ಲಿ ನಿರ್ಮಿತಗೊಂಡಿತು. ವಾಣಿಜ್ಯೋದ್ಯಮದಲ್ಲಿ ಉಪಯೋಗಿಸುತ್ತಿದ್ದ ಈತನ ಜಹಜಿಗೆ "ಈಶ್ವರೀ ಮಹಾಮಾಯಿ" ಎಂಬ ಹೆಸರಿತ್ತು.

ಸೋಮಶೇಖರ (ಇಮ್ಮಡಿ)ನ ತರುವಾಯ ಇಮ್ಮಡಿ ಬಸಪ್ಪನಾಯಕನು 1739ರಲ್ಲಿ ಅಧಿಕಾರಕ್ಕೆ ಬಂದನು. ಈತನು ಮರಾಠೆಯವರ ಹಾವಳಿಯನ್ನು ಹಿಮ್ಮೆಟ್ಟಿಸಿ, 1748ರಲ್ಲಿ ಮಾಯಕೊಂಡ ಯುದ್ಧದಲ್ಲಿ ಚಿತ್ರದುರ್ಗದ ಮದಕರಿನಾಯಕನನ್ನು ಬಂದಿಯಾಗಿಸಿದನು. 1753ರಲ್ಲಿ ಚಂದ್ರಗಿರಿಗೆ ಮುತ್ತಿಗೆಹಾಕಲು ಬಂದ ಕೋಲತ್ತಿರಿ ಅರಸನನ್ನು ಸೋಲಿಸಿದನು. ಸೋತುಹೋದ ಮಲಬಾರಿ ಅರಸನು ಅಮೂಲ್ಯವಾದ ಪಚ್ಚೆ ರತ್ನವೊಂದನ್ನು ಕೆಳದಿ ಅರಸನಿಗೆ ಕಾಣಿಕೆಯಾಗಿತ್ತನು. ಸೆಕ್ರೆಟೇರಿಯೆಟ್

---

1. ಈ ಕುರಿತು ನಡೆಸಿದ ನನ್ನ ಸಂಶೋಧನೆಗಳನ್ನು ಪತ್ರಿಕೆಗಳಲ್ಲಿ ಅವಲೋಕಿಸಬಹುದು.
2. ಇದು ಹುಬ್ಬಳ್ಳಿಯ ಶ್ರೀ ಜಗದ್ಗುರು ಮೂರುಸಾವಿರ ಮಠದಲ್ಲಿದೆ.

ಇನ್‌ವರ್ಡ್ ಲೆಟರ್ ಬುಕ್ ಆಧಾರದ ಮೇರೆಗೆ ವಾಣಿಜ್ಯೋದ್ಯಮದಲ್ಲಿ ಫ್ರೆಂಚರೂ ಈತನ ಸಹಾಯ ಪಡೆದುಕೊಂಡರು.[1]

## ರಾಣಿ ವೀರಮ್ಮಾಜಿ

ಇಮ್ಮಡಿ ಬಸಪ್ಪನಾಯಕನ ದತ್ತುಪುತ್ರ ಚೆನ್ನಬಸಪ್ಪನಾಯಕನು 1755ರಲ್ಲಿ ಅಧಿಕಾರ ಪಡೆದು 1758ರವರೆಗೆ ಆಳಿದನು. ಈತನ ಅಕಾಲ ಮರಣದಿಂದ ರಾಣಿ ವೀರಮ್ಮಾಜಿಯು ಆಡಳಿತವನ್ನು ಕೈಗೆತ್ತಿಕೊಂಡಳು. 1755ರ ಸೆಪ್ಟೆಂಬರ್‌ನಲ್ಲಿ ಮರಾಟೆಯವರು ಕೊಲ್ಲೂರು ಶ್ರೀ ಮೂಕಾಂಬಿಕಾ ದೇವಾಲಯ ಲೂಟಿ ಮಾಡತೊಡಗಿದಾಗ ಅಲ್ಲಿ ನಡೆದ ಅತ್ಯಾಚಾರವನ್ನು ಕೇಳಿ ಕುಪಿತಳಾದ ರಾಣಿಯು ರಾವುತ ಪಡೆಯವರನ್ನು ಕಳಿಸಿ ರಕ್ಷಣೆ ನೀಡಿದಳು. 1758ರಲ್ಲಿ ಶೃಂಗೇರಿ ಶ್ರೀ ಅಭಿನವ ಸಚ್ಚಿದಾನಂದ ಭಾರತಿಗಳು ರಾಜಧಾನಿಗೆ ಆಗಮಿಸಿ ಮಠಕ್ಕೆ ಭಾರಿ ಸಾಲವಾಗಿರುವುದನ್ನು ಅರುಹಲು, ಸಾಲವನ್ನು ತೀರಿಸಿ, ಗುರುಗಳಿಗೆ ಸ್ಫಟಿಕಲಿಂಗ ಹಾಗೂ ರತ್ನಖಚಿತ ಗೋಪಾಲಕೃಷ್ಣ ಮೂರ್ತಿಯನ್ನು ಸಮರ್ಪಿಸಿ ಮುನ್ನೂರು ವರಹ ಬೆಲೆಬಾಳುವ ಭೂಸ್ವಾಸ್ಥೆಯನ್ನು ಶಿವಾರ್ಪಿತವಾಗಿತ್ತಳು.

## ಉಪಸಂಹಾರ

ಕೆಳದಿ ಅರಸರು ಕನ್ನಡ ಸಂಸ್ಕೃತಿಯನ್ನು ಶ್ರೀಮಂತಗೊಳಿಸುವಲ್ಲಿ ಹೋರಾಡಿದರು. ಇವರ ಗುಣಾತಿಶಯಗಳು, ಸಾಮಾನ್ಯ ಜನತೆಯ ನೆಮ್ಮದಿಗೆ ಗಮನವಿಡುವ ಕ್ರಿಯಾಶೀಲತೆ, ಶತ್ರುಗಳನ್ನು ಎದುರಿಸುವ ಸಾಮರ್ಥ್ಯ, ಸ್ವಾಮಿನಿಷ್ಠೆ, ಮುತ್ಸದ್ದಿತನ, ಪಾಂಡಿತ್ಯ, ಸಾಹಿತ್ಯ–ಕಲೆಗಳಿಗೆ ಪ್ರೋತ್ಸಾಹ, ದಯಾರ್ದ್ರತೆ, ಇವೆಲ್ಲಕ್ಕೂ ಮಿಗಿಲಾಗಿ ಧರ್ಮಸಹಿಷ್ಣುತೆ ಹಾಗೂ ಸರ್ವಧರ್ಮ ಸಮನ್ವಯತೆಗಳು ಮುಂದಿನ ಪೀಳಿಗೆಗೆ ಆದರ್ಶಪ್ರಾಯವಾಗಿವೆ. ಕೆಳದಿ ರಾಜ್ಯದ ಸಾಮಾನ್ಯ ಜನತೆಯ ನೆಮ್ಮದಿಯನ್ನು ಕುರಿತು ವಿದೇಶೀಯ ದಾಖಲೆಗಳೊಂದಿಗೆ ಸಂಪ್ರಬಂಧದಲ್ಲಿ ಪೂನಾದ ಡಾ|| ಚಿಟ್ನೀಸ್‌ರವರು—

Peace and order reigned supreme under the Keladi rulers, law and justice were respected in the Keladi State, and the people were on the whole happy and contented under their monarchs. About the security in the Keladi state, Alexander Hamilton has the following remarks to make : "The subjects of this country observe the laws so well, that Robbery or Murder are hardly heard of among them. And a stranger may pass

---

1. ಫ್ರೆಂಚ್ ಭಾಷೆಗಳಲ್ಲಿರುವ ಇಂತಹ ಹಲವಾರು ದಾಖಲೆಗಳನ್ನು ಪಾಂಡಿಚೆರಿಯಲ್ಲಿರುವ ಸರಕಾರದ ಪತ್ರಾಗಾರದಲ್ಲಿ ನಾನು ಅವಲೋಕಿಸಿದ್ದೇನೆ.

through the country without being asked where he is going, or what business he has"-About the law abiding habits of the People of Mangalore, John Fryer says :"They have well constituted laws and observe them obediently". Mr. Stokes, in his survey of Nagar division remarks about the nature of the people of the Bednur thus : "I have no where in India seen so much honesty and veracity as among the country people of Nagara. The ryots of Nagara have always prided themselves on their nationality".

ವಿಶ್ಲೇಷಿಸಿ ಅಭಿಪ್ರಾಯಪಟ್ಟಿದ್ದಾರೆ. ರಾಷ್ಟ್ರೀಯ ಅಭಿಮಾನದ ಅಭಾವವಿರುವ ಈ ಕಾಲದಲ್ಲಿ ಇಂತಹ ಹಾಗೂ ಸಾಮಾನ್ಯ ಜನತೆಯ ನೆಮ್ಮದಿಯನ್ನಾಧರಿಸಿ ಸುಂದರವಾಗಿ ರಾಜ್ಯವನ್ನಾಳಿದ ಕೆಳದಿ ಅರಸರ ಧ್ಯೇಯೋದ್ದೇಶವನ್ನೇ ಈಗಿನ ಪ್ರಜಾಪ್ರಭುತ್ವದ ಜನಸಾಮಾನ್ಯತೆಯು ಬಯಸುತ್ತದೆಯಲ್ಲವೇ? ಇದಕ್ಕಿಂತಲೂ ಹೆಚ್ಚಿನ ಸಾಧನೆ ಏನಿದೆ?

o o o o o

## ಅನುಬಂಧ

### ಕೆಳದಿ ಮತ್ತು ಕೇರಳ ಗಡಿ ಒಪ್ಪಂದದ ಚಾರಿತ್ರಿಕ ದಾಖಲೆ

ದಿನಾಂಕ 26–8–1637

"That from the fort of Madday westward, to urbelly southward and to the hills, eastward with all the territories northward, bordering on the river, I resign to the King of Bednore (Keladi), to be enjoyed by him acccrdingly. as I am to do with what remains to the southward.

Logan : A collection' pt. I XXV, pp. 33-34.

**ಕನ್ನಡ ಸಾರಾಂಶ**

ಮಾಡಾಯಿ ಕೋಟೆಯಿಂದ ಪಶ್ಚಿಮಕ್ಕೆ ಊರ ಬಳ್ಳಿವರೆಗೆ, ದಕ್ಷಿಣಕ್ಕೆ ಪೂರ್ವಕ್ಕೆ ತಳಿಪರಂಬಾ ನದಿ ಹೇಗೆ ಗುಡ್ಡದಿಂದ ಹರಿದು ಬಂದದೋ ಅಲ್ಲಿಯವರೆಗೆ ಇರುವ ರಾಜ್ಯ ಬಿದನೂರಿಗೆ (ಕೆಳದಿಗೆ) ಸೇರತಕ್ಕದ್ದು. ಇದರ ದಕ್ಷಿಣಕ್ಕೆ ಬಾಕಿ ಉಳಿದ ರಾಜ್ಯವು ಕೋಲತ್ತರಸನಿಗೆ ಇರತಕ್ಕದ್ದು. ಇಬ್ಬರಲ್ಲಿ ಯಾರೊಬ್ಬರೂ ಒಬ್ಬನ ರಾಜ್ಯದಲ್ಲಿ ಇನ್ನೊಬ್ಬನು ಕೈಹಾಕಕೂಡದು. ಇದಕ್ಕೆ ಆಧಾರವಾಗಿ ನಾನು ತಲಚೇರಿಯ ಇಂಗ್ಲಿಷ್ ಅಧಿಕಾರಿ ಮತ್ತು ಕೌನ್ಸಿಲಿನ ಮುಂದೆ ಈ ಕರಾರನ್ನು ಒಪ್ಪಿಸಿದ್ದೇನೆ.

**ದಸ್ಕತು ಸೂರಪ್ಪಯ್ಯ. ಕನ್ನಡ ಸೈನ್ಯದ ಜನರಲ್**

——

# 'ಕರ್ನಾಟಕದ ಮಧ್ಯಕಾಲೀನ ಧಾರ್ಮಿಕ ಪರಿಸರದಲ್ಲಿ ಜೈನಧರ್ಮ'

---

ಸಿ. ನಾಗಭೂಷಣ

ಪ್ರತಿಯೊಂದು ಧರ್ಮದ ಉಗಮವು ಉದಾತ್ತೀಕರಣವನ್ನು ಹೊಂದಿದ್ದರೂ ಆಯಾ ಕಾಲ ದೇಶಗಳ ಪರಿಸ್ಥಿತಿಯನ್ನು ತನ್ನ ತೆಕ್ಕೆಯೊಳಗೆ ಅಡಗಿಸಿಕೊಂಡಿರುತ್ತದೆ. ಯಾವುದೇ ಧರ್ಮವು ಪ್ರತಿಪಾದಿಸುವ ನೀತಿ ನಿಯಮಾವಳಿಗಳು, ಸಾರುವ ಜೀವನ ಮೌಲ್ಯಗಳು ಕಾಲ ಮತ್ತು ಪರಿಸರಕ್ಕೆ ಅನುಗುಣವಾಗಿರುತ್ತವೆ. ಕಾಲ ಮತ್ತು ಪರಿಸರ ಬದಲಾವಣೆ ಆದಾಗ ಜೀವನ ಮೌಲ್ಯಗಳು ಮತ್ತು ನೀತಿ ನಿಯಮಾವಳಿಗಳು ಸಾರ್ವಕಾಲಿಕ ಗುಣಗಳನ್ನು ಹೊಂದಿದ್ದರೆ ಚಲನಶೀಲವಾಗಿ ಅಸ್ತಿತ್ವದಲ್ಲಿರುತ್ತವೆ. ಜಡತ್ವ ಮತ್ತು ಒಣ ಆಚರಣೆಗಳನ್ನು ಒಳಗೊಂಡಿದ್ದರೆ ಅಸ್ತಿತ್ವದಲ್ಲಿ ಸಡಿಲತೆ ಉಂಟಾಗಿ ಅವನತಿಯ ಹಾದಿ ಹಿಡಿಯುತ್ತವೆ. ಧರ್ಮವು ಪರಿಸರದ ಪ್ರಭಾವದಿಂದ ಹೇಗೆ ರೂಪುಗೊಳ್ಳುತ್ತದೆ ಎಂಬುದಕ್ಕೆ ಬೌದ್ಧ ಮತ್ತು ಜೈನ ಧರ್ಮಗಳ ಉಗಮವು ಅತ್ಯುತ್ತಮ ನಿದರ್ಶನವಾಗುತ್ತದೆ.

ಮಧ್ಯಕಾಲೀನ ಧಾರ್ಮಿಕ ಪರಿಸರದಲ್ಲಿ ಮೂರು ಅಂಶಗಳನ್ನು ಮುಖ್ಯವಾಗಿ ಗುರುತಿಸಬಹುದಾಗಿದೆ—

೧. ಪೂರ್ವದಿಂದಲೂ ಯೋಗ, ಕರ್ಮ ಮತ್ತು ಭೋಗ ಮಾರ್ಗಗಳನ್ನು ಅಸ್ತಿತ್ವವನ್ನಾಗಿಸಿಕೊಂಡಿದ್ದ ಬೌದ್ಧ, ಜೈನ ಮತ್ತು ಹಿಂದೂ ಧರ್ಮಗಳು ಈ ಕಾಲದಲ್ಲಿ ಮುಂದುವರಿದವು.

೨. ಈ ಮತಧರ್ಮಗಳ ಜೊತೆಗೆ ಪ್ರತಿರೋಧ ಎನ್ನುವಂತೆ ಬಂಡಾಯೋಪಾದಿಯಲ್ಲಿ ಭಕ್ತಿ ಮಾರ್ಗ ಪಂಥಗಳು ಅಸ್ತಿತ್ವಕ್ಕೆ ಬಂದವು.

೩. ಪ್ರಾಚೀನ ಮತ್ತು ನವಪಂಥಗಳ ನಡುವೆ 'ಸಂಘರ್ಷ' ಮತ್ತು 'ಸಮನ್ವಯ' ಗಳ ಪರಿಸ್ಥಿತಿ ನಿರ್ಮಾಣವಾಯಿತು.

ಈ ಹಿನ್ನೆಲೆಯಲ್ಲಿ ಮಧ್ಯಕಾಲೀನ ಕರ್ನಾಟಕದ ಧಾರ್ಮಿಕ ಪರಿಸರದಲ್ಲಿ ಪ್ರಮುಖ ಧರ್ಮಗಳಲ್ಲಿ ಒಂದಾದ ಜೈನಧರ್ಮದ ಸ್ಥಿತಿಗತಿಯನ್ನು ತಿಳಿಯಬಹುದು. ಅಧ್ಯಯನ ದೃಷ್ಟಿಯಿಂದ ಈ ಅವಧಿಯ ಜೈನಧರ್ಮದ ಸ್ಥಿತಿಗತಿಗಳನ್ನು ನಾಲ್ಕು ದೃಷ್ಟಿಕೋನಗಳಿಂದ ಇಲ್ಲಿ ಚರ್ಚಿಸಲಾಗಿದೆ—

೧. ರಾಜಕೀಯ ಸ್ಥಿತಿ.

೨. ಸಾಮಾಜಿಕ ಮತ್ತು ಆರ್ಥಿಕ ನೆಲೆಯಲ್ಲಿ ಅದರ ಅಸ್ತಿತ್ವ.

೩. ಜೈನಧರ್ಮ ಮತ್ತು ವೀರಶೈವ ಧರ್ಮಗಳ ನಡುವಿನ ಸಂಘರ್ಷ ಮತ್ತು ಸಮನ್ವಯ.

೪. ಸ್ಥಾನಭದ್ರತೆಗಾಗಿ ಜೈನಧರ್ಮವು ಅನ್ಯ ಧರ್ಮಗಳೊಂದಿಗೆ ನಡೆಸಿದ ಹೋರಾಟ.

೧. **ರಾಜಕೀಯ ಸ್ಥಿತಿ :** ಜೈನಧರ್ಮವು ಮಧ್ಯಕಾಲೀನ ಯುಗದಲ್ಲಿ ಕರ್ನಾಟಕದ ಎಲ್ಲಾ ಭಾಗಗಳಲ್ಲಿಯೂ ಒಂದೇ ಸ್ಥಾನವನ್ನು ಪಡೆದಿರಲಿಲ್ಲ. ಶಾಸನಗಳಲ್ಲಿನ ಆಧಾರಗಳಿಂದ ತುಂಗಭದ್ರೆಯ ಉತ್ತರ ಮತ್ತು ದಕ್ಷಿಣ ಭಾಗಗಳಲ್ಲಿ ಆ ಕಾಲದ ಜೈನಧರ್ಮದ ಸ್ಥಿತಿಯನ್ನು ಗುರುತಿಸಬಹುದಾಗಿದೆ. ೯, ೧೦ ಮತ್ತು ೧೧ನೇ ಶತಮಾನದ ಪೂರ್ವಾರ್ಧದಲ್ಲಿನ ಅರಸುಗಳಾದ ರಾಷ್ಟ್ರಕೂಟರು ಮತ್ತು ಕಲ್ಯಾಣಿ ಚಾಲುಕ್ಯರ ಆರಂಭಕಾಲದ ರಾಜರುಗಳು ಮತ್ತು ಅಧಿಕಾರವರ್ಗದವರು ಬಹಳಷ್ಟು ಮಂದಿ ಜೈನರು ಮತ್ತು ಜೈನ ಬೆಂಬಲಿಗರು ಆಗಿದ್ದುದಾಗಿ ತಿಳಿದುಬರುತ್ತದೆ. ರಾಷ್ಟ್ರಕೂಟರಲ್ಲಿ ನೃಪತುಂಗ ಮತ್ತು ಅನಂತರದವರು ಜೈನಧರ್ಮಾವಲಂಬಿತರಾಗಿದ್ದರು. ಜೈನಾಚಾರ್ಯರುಗಳು (ಜಿನಸೇನ ಮತ್ತು ಗುಣಭದ್ರರು) ಇವರ ರಾಜಗುರುಗಳಾಗಿದ್ದರು. ರಾಷ್ಟ್ರಕೂಟರ ರಾಜಕೀಯ ಸಂಬಂಧ ಪ್ರಾಪ್ತವಾದ ಕಾಲದಲ್ಲಿ ಗಂಗದೊರೆಗಳಾದ ರಾಜಮಲ್ಲ, ಮಾರಸಿಂಹ, ಬೂತುಗ ಮೊದಲಾದವರು ಜೈನಧರ್ಮಾನುಯಾಯಿಗಳಾಗಿದ್ದರು. ದಂಡನಾಯಕರು ಮತ್ತು ಪ್ರತಿಷ್ಠಿತ ವ್ಯಕ್ತಿಗಳು ಜೈನಧರ್ಮದ ಬಗೆಗೆ ವಿಶೇಷ ಒಲವನ್ನು ಮೂಡಿಸಿಕೊಂಡಿದ್ದರು. ಕಲ್ಯಾಣಿ ಚಾಲುಕ್ಯದೊರೆ ಒಂದನೇ ಸೋಮೇಶ್ವರನ (ಕ್ರಿ. ಶ. 1044–1068) ಕಾಲದಲ್ಲಿ ಚೋಳದೊರೆಗಳು ಚಾಲುಕ್ಯರಾಜ್ಯದ ಮೇಲೆ ಎರಡುಸಲ ಧಾಳಿ ನಡೆಸಿದಾಗ ಜೈನಧರ್ಮವು ಬಲವಾದ ಹೊಡೆತವನ್ನು ಅನುಭವಿಸಿತು. ಉತ್ತರ ಕರ್ನಾಟಕ ಭಾಗವನ್ನು ಆಳುತ್ತಿದ್ದ ಕಲ್ಯಾಣಿ ಚಾಲುಕ್ಯರು ಶೈವ ಮತ್ತು ವೈಷ್ಣವ ಮತಕ್ಕೆ ಕೊಟ್ಟ ಪ್ರೋತ್ಸಾಹದಿಂದ ಜೈನಮತದ ಬೇರುಗಳು ಸಡಿಲಗೊಳ್ಳತೊಡಗಿದವು. ಆದರೆ ಈ ಯುಗದ ಆರಂಭ ಕಾಲದಲ್ಲಿ ಜನಸಮೂಹದಲ್ಲಿ ಬಹುಮಂದಿ ಜೈನರಿದ್ದುದರಿಂದ ಸ್ವಲ್ಪಮಟ್ಟಿಗೆ ಜನಸಾಮಾನ್ಯರ ಬೆಂಬಲ ಪಡೆಯಿತು. ಕಲ್ಯಾಣಿ ಚಾಲುಕ್ಯರ ಸಮಕಾಲೀನರಾಗಿ ಆಳ್ವಿಕೆ ನಡೆಸಿದ ಸೇವುಣರು ಜೈನಧರ್ಮಕ್ಕೆ ಕೆಲವೊಂದು ನೆರವನ್ನು ನೀಡಿದ ಬಗೆಗೆ ಶಾಸನಗಳಲ್ಲಿ ಉಲ್ಲೇಖ ಇದೆ. ಸೇವುಣರ ಕಾಲದಲ್ಲಿನ ಜೈತುಗಿಯ ಒಬ್ಬ ಅಧಿಕಾರಿಯನ್ನು 'ಜೈನಾಗಮವಾರ್ಧಿಸೋಮ' ಎಂದು ಶಾಸನವು ಕರೆದಿದೆ. ಸೇವುಣ ದೊರೆ ಸಿಂಘಣ (II)ನ ಮಂತ್ರಿಯಾದ ಬೀಚಿಸೆಟ್ಟಿಯ ಹೆಂಡತಿ ಲಕ್ಷ್ಮೇಶ್ವರದ ವಿಜಯ ಜಿನಾಲಯವನ್ನು ದುರಸ್ತಿ ಮಾಡಿಸಿದಳು. ಇವರ ಮಗ ಕಲ್ಕೇರಿಯಲ್ಲಿ ಒಂದು ಬಸದಿಯನ್ನು ನಿರ್ಮಿಸಿದನು. ಸೇವುಣರ ದೊರೆ ಮಹಾದೇವ ಮತ್ತು ರಾಮಚಂದ್ರರ ಕಾಲದಲ್ಲಿ ಲಕ್ಷ್ಮೇಶ್ವರ ಮತ್ತು ಡಂಬಳಗಳಲ್ಲಿನ ಬಸದಿಗಳು ದತ್ತಿಗಳನ್ನು ಪಡೆದವು. ಆದಾಗ್ಯೂ ಉತ್ತರ ಕರ್ನಾಟಕದಲ್ಲಿ ದೊರೆಯುವ ಈ ಅವಧಿಯ ಶಾಸನ

ಗಳನ್ನು ಪರಿಶೀಲಿಸಿದರೆ ಜೈನಧರ್ಮದ ಉಲ್ಲೇಖ ಇರುವ ಶಾಸನಗಳು ತೀರಾ ವಿರಳ ವೆಂದೇ ಹೇಳಬೇಕಾಗುತ್ತದೆ.

ತುಂಗಭದ್ರೆಯ ದಕ್ಷಿಣ ಭಾಗದಲ್ಲಿ ಆಳಿದ ಹೊಯ್ಸಳರಲ್ಲಿ ಆರಂಭಕಾಲದ ಅರಸರು ಗಳು ಜೈನಧರ್ಮಕ್ಕೆ ವಿಶೇಷ ಒಲವನ್ನು ತೋರಿದರು. ವಿಷ್ಣುವರ್ಧನನ ಕಾಲದಲ್ಲಿ ಜೈನಮತವು ತನ್ನ ವಿಜೃಂಭಣೆಯ ಕೊನೆಯ ಹಂತವನ್ನು ಮುಟ್ಟಿತು.[1] ಹೊಯ್ಸಳ ದೊರೆ ಎರೆಯಂಗನ ಕಾಲದಿಂದ ಜೈನಮತವು ಬತ್ತತೊಡಗಿರುವುದರ ಬಗೆಗೆ ಶಾಸನಗಳಲ್ಲಿ ಆಧಾರ ದೊರೆಯುತ್ತದೆ. ಕ್ರಿ. ಶ. 107೦ರ ಅನಂತರ ಸುಮಾರು 35 ವರ್ಷಗಳ ಅವಧಿಯಲ್ಲಿ ಜೈನ ಶಾಸನಗಳನ್ನು ನಾವು ಹೆಚ್ಚಾಗಿ ಕಾಣುವುದಿಲ್ಲ. ರಾಜರುಗಳ ವೈಯಕ್ತಿಕ ಒಲವನ್ನು ಜೈನಧರ್ಮವು ಕಳೆದುಕೊಂಡಿತ್ತು ಎಂದು ಊಹೆಮಾಡಬಹುದು. ಈ ಅರಸರುಗಳು ಶೈವ ಮತ್ತು ವೈಷ್ಣವ ಮತಕ್ಕೆ ಪ್ರೋತ್ಸಾಹ ಕೊಟ್ಟರು ಎಂಬುದು ಶೈವ ಮತ್ತು ವೈಷ್ಣವ ದೇವಾಲಯಗಳನ್ನು ಕಟ್ಟಿಸಿದ ಸಂಖ್ಯೆ ಮತ್ತು ಬಿಟ್ಟ ದತ್ತಿಯಿಂದ ತಿಳಿದುಬರುತ್ತದೆ. ಆದಾಗ್ಯೂ ಈ ಅವಧಿಯಲ್ಲಿ ಜೈನಧರ್ಮವು ಆಳುವ ಅರಸರ ನೆರವನ್ನು ಪಡೆಯದೇ ಇದ್ದರೂ, ದಂಡನಾಯಕರು, ಮಂತ್ರಿಗಳು, ವಣಿಕರು ಹಾಗೂ ಹಲವಾರು ವೃತ್ತಿಗಳಿಗೆ ಸೇರಿದವರು ಈ ಧರ್ಮವನ್ನು ಪ್ರೋತ್ಸಾಹಿಸಿ ಅದರ ಪ್ರಸಾರ ಕ್ಕಾಗಿ ಶ್ರಮಿಸಿದರು. ಹೊಯ್ಸಳರ ಕೊನೆಯ ರಾಜರುಗಳ ಆಳ್ವಿಕೆಯ ವೇಳೆಗೆ ಜೈನ ಧರ್ಮವು ಹಲವು ಕೇಂದ್ರಗಳಲ್ಲಿ ಅದರಲ್ಲೂ ಶ್ರವಣಬೆಳ್ಗೊಳದ ಪರಿಸರಕ್ಕೆ ಸೀಮಿತ ವಾದಂತೆ ತೋರಿಬರುತ್ತದೆ. ಶ್ರವಣಬೆಳ್ಗೊಳ ಪರಿಸರದ ಜೈನಧರ್ಮಕ್ಕೆ ಸಂಬಂಧಿಸಿದ ಧಾರ್ಮಿಕ ಚಟುವಟಿಕೆಗಳನ್ನು ಪರಿಶೀಲಿಸಿದರೆ ಆ ಕಾಲದ ಜೈನಧರ್ಮದ ವ್ಯಕ್ತಿಗಳು ವಣಿಕವರ್ಗಕ್ಕೆ ಸೇರಿದವರು ಎಂಬ ಅಂಶ ಶಾಸನಗಳಿಂದ ತಿಳಿದುಬರುತ್ತದೆ. ಹೊಯ್ಸಳರ ಆರಂಭದ ದೊರೆಗಳನ್ನು ಹೊರತುಪಡಿಸಿ ಅನಂತರ ಕಾಲದಲ್ಲಿ ರಾಜಕೀಯವಾಗಿ ಜೈನರ ಸಾಧನೆ ಅಥವಾ ಸ್ಥಾನಮಾನವು ಅತ್ಯಲ್ಪವಾದುದಾಗಿದೆ. ಒಟ್ಟಾರೆ ರಾಜಕೀಯವಾಗಿ ಜೈನಮತದ ಸ್ಥಾನವನ್ನು ಮಧ್ಯಕಾಲೀನ ಯುಗದಲ್ಲಿ ಗ್ರಹಿಸಬಹುದಾದರೆ, ಆಳುವ ಅರಸರುಗಳ ವೈಯಕ್ತಿಕ ಒಲವನ್ನು ಕಳೆದುಕೊಂಡಿದ್ದರೂ ಸಾಮಂತರ, ಹೆಗ್ಗಡೆಗಳ ದಣ್ಣಾಯಕ, ವಣಿಕ ಮುಂತಾದ ಸಣ್ಣಪುಟ್ಟ ಅಧಿಕಾರಿ ವರ್ಗಗಳ ಆಶ್ರಯದಿಂದ ಮುಂದುವರಿಯಲು ಪ್ರಯತ್ನಿಸುತ್ತಿತ್ತು. ಸುಮಾರು ಒಂದು ಶತಮಾನದ ಈ ಪ್ರಯತ್ನ ವಿಫಲಗೊಂಡು ಸುಮಾರು ಕ್ರಿ. ಶ. 1200 ರಿಂದ ಈ ಧರ್ಮವು ಹಲವು ಕೇಂದ್ರಗಳಲ್ಲಿ ಸೀಮಿತಗೊಳ್ಳತೊಡಗಿತು.

---

೧. ಎಸ್. ಶೆಟ್ಟರ್ : ಭಾರತೀಯ ಹಿನ್ನೆಲೆಯಲ್ಲಿ ಕರ್ನಾಟಕದ ಧಾರ್ಮಿಕ, ಸಾಮಾ ಜಿಕ ಜೀವನ–ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ (ಸಂ॥ ಜಿ. ಎಸ್. ಶಿವರುದ್ರಪ್ಪ) ಸಂ. 3, ಪುಟ 23.

ಮಧ್ಯಕಾಲೀನ ಯುಗದಲ್ಲಿ ಜೈನಧರ್ಮವು ತುಂಗಭದ್ರೆಯ ಉತ್ತರ ಮತ್ತು ದಕ್ಷಿಣ ಭಾಗಗಳೆರಡರಲ್ಲಿಯೂ ಅವನತಿಯ ಹಂತವನ್ನು ತಲುಪಿದ್ದರೂ, ಹೊಸ ಧಾರ್ಮಿಕ ಪಂಥಗಳ ಆಂದೋಲನದ ಪ್ರಭಾವಕ್ಕೆ ಒಳಗಾಗದಿದ್ದ ಪಶ್ಚಿಮ ಕರಾವಳಿಯಲ್ಲಿ ತನ್ನ ಹೊಸ ಅಸ್ತಿತ್ವವನ್ನು ಹುಡುಕಿಕೊಂಡಿತು ಎನ್ನಬಹುದು. ತಮಿಳುನಾಡಿನ ಆಳುಪರ ಕಾಲದಲ್ಲಿ ಜೈನಧರ್ಮ ಸ್ವಲ್ಪಮಟ್ಟಿನ ಪ್ರೋತ್ಸಾಹವನ್ನು ಗಳಿಸಿಕೊಂಡಿತು. ಆ ಭಾಗಕ್ಕೆ ಸಂಬಂಧಿಸಿದಂತೆ ಇದು ಜೈನಧರ್ಮದ ಪ್ರಾರಂಭದ ಕಾಲ ಎಂದು ತೋರುತ್ತದೆ.[2] ಮಧ್ಯಕಾಲೀನ ಯುಗದನಂತರ ಜೈನಧರ್ಮವು ದಕ್ಷಿಣ ಕರ್ನಾಟಕ ಮತ್ತು ಮಲೆನಾಡು ಕರಾವಳಿ ಭಾಗಗಳಲ್ಲಿ ತನ್ನ ಇರುವಿಕೆಯನ್ನು ಗುರುತಿಸಿಕೊಂಡಿತು ಎಂದು ಹೇಳಬಹುದು.

**೨. ಸಾಮಾಜಿಕ ಹಾಗೂ ಆರ್ಥಿಕ ನೆಲೆಯಲ್ಲಿ ಅದರ ಅಸ್ತಿತ್ವ :**

ಈ ಯುಗದಲ್ಲಿ ದಿಗಂಬರ ಜೈನ ಪಂಥವು ಆಚರಣೆಯಲ್ಲಿತ್ತು. ಉಚ್ಛ್ರಾಯ ಸ್ಥಿತಿಯಲ್ಲಿದ್ದಾಗ ವಿಭಾಗಗೊಂಡು ಅಸ್ತಿತ್ವದಲ್ಲಿದ್ದ ಮೂಲ- ನಂದಿ, ಯಾಪನೀಯ, ಯಾಪನೀಯ ನಂದಿ, ದ್ರಾವಿಡ, ಶ್ರೀ, ಕಿತ್ತೂರ ಮೊದಲಾದ ಸಂಘಗಳು, ದೇವ, ಸೇನ, ಬಲಾತ್ಕಾರ, ಬಳಿಗಾರ, ದೇಶಿಯ, ದ್ರಮಿಳ, ಪುನ್ನಾಗ, ನಂದಿ, ಗ(ಕ)ವಾಟ, ಸೂರಸ್ತ, ತಾಣೂರ್, ಕಾರೆಯ, ಆಜಿ ಮೊದಲಾದ ಗಣಗಳೂ, ಪೊಗರಿ ಪುಸ್ತಕ, ತಗರಿಗಲ್' ಸರಸ್ವತಿ. ಕಜೂರ್, ಚಿತ್ರಕೂಟ, ತಿಂತ್ರಿಣಿಕ, ಮೇಘ, ಪಾಶಾಣ ಮೊದಲಾದ ಗಚ್ಛಗಳು. ಪೊರಳ್, ಪಾಷಾಣ, ಕೊಂಡಕುಂದ, ಅರುಂಗಳ, ಕೀರ್ತ್ಯಾಚಾರ್ಯ, ಹನಸೋಗೆ. ಮೈಲಾಪ[3] ಮೊದಲಾದ ಅನ್ವಯಗಳಲ್ಲಿ ಎಲ್ಲಾ ಇರದಿದ್ದರೂ ಕೆಲವನ್ನು ಸಂಘ, ಗಣ, ಗಚ್ಛಗಳು ಇದ್ದುದಾಗಿ ಶಾಸನ ಮತ್ತು ಕಾವ್ಯಗಳಿಂದ ತಿಳಿದುಬರುತ್ತದೆ. ಈ ಕಾಲದಲ್ಲಿ ನಾಗರಖಂಡ ಎಪ್ಪತ್ತರ ಪರಿಸರದ ಅಬ್ಬಲೂರು ಸುತ್ತಮುತ್ತಲ ಪ್ರದೇಶಗಳಲ್ಲಿ ಬಲತ್ಕಾರ. ಸೇನ, ಕಾಲುಂಗ್ರಣ್ಣ (ಕಾಣೂರ್) ಗುಮ್ಮಟ (ಕವಾಟ) ದೇಶಿ ಮುಂತಾದ ಜೈನಗಣಗಳು ಇದ್ದವೆಂದು ಅಬ್ಬಲೂರು ಚರಿತೆಯಿಂದ[4] ತಿಳಿದುಬರುತ್ತದೆ. ಪುಲಿಗೆರೆಯಲ್ಲಿ ಇದೇ ಅವಧಿಯಲ್ಲಿ ನಂದಿ, ಮೂಲ, ವಾಪುಲಿ (ಯಾಪಾನೀಯ) ಗಳೆಂಬ ಜೈನ ಸಂಘಗಳು, ಮೇಘ ಎಂಬ ಗಚ್ಛವು ಇದ್ದವೆಂದು ಸೋಮನಾಥ ಚಾರಿತ್ರದಿಂದ ತಿಳಿದುಬರುತ್ತದೆ.[5]

---

2. ಎಸ್. ನಾಗರಾಜು : ಕರ್ನಾಟಕದ ಧಾರ್ಮಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಜೀವನ. ಕನ್ನಡ ಅಧ್ಯಯನ ಸಂಸ್ಥೆಯ ಸಾಹಿತ್ಯ ಚರಿತ್ರೆ, ಸಂ. 4, ಪು.144.
3. ಎಂ. ಚಿದಾನಂದಮೂರ್ತಿ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.88.
4. ಅಬ್ಬಲೂರು ಚರಿತೆ (ಸಂ॥ ಎಸ್. ಬಸವಾರಾಧ್ಯ) ಸಂ. 4 ಪ.ಸಂ. 58.
5. ಸೋಮನಾಥ ಚಾರಿತ್ರ (ಸಂ॥ ಆರ್. ಸಿ. ಹಿರೇಮಠ, ಎಂ. ಎಸ್. ಸುಂಕಾಪುರ) ಸ್ಥಳ. 5, ಪ.ಸಂ. 43.

ಜೈನಮತವು ಉಚ್ಛ್ರಾಯ ಸ್ಥಿತಿಯಲ್ಲಿದ್ದಾಗ ಇದ್ದಂತಹ ಆಚರಣೆಗಳು ಮಧ್ಯ ಕಾಲೀನ ಯುಗದಲ್ಲಿ ಸಡಿಲಗೊಂಡಿದ್ದವು ಎಂಬಂತೆ ತೋರಿಬರುತ್ತದೆ. ಕೆಲವು ಸಲ್ಲದ ಆಚರಣೆಗಳು ಇಣುಕುಹಾಕಿದ್ದವು. ಈ ಕಾಲದಲ್ಲಿ ಹಿಂದೂ ದೇವತೆಗಳು ಜಿನಾಲಯ ಗಳಲ್ಲಿ ಯಕ್ಷ ಯಕ್ಷಿಯರೆನಿಸಿಕೊಂಡು ಹೆಚ್ಚುಸ್ಥಾನ ಪಡೆದರಲ್ಲದೆ ಸ್ವತಂತ್ರ ದೇವತೆ ಗಳಾಗಿ ದೇವಾಲಯಗಳನ್ನು ಗಳಿಸಿಕೊಂಡವು. ಸರ್ವಾಹ್ಣ, ಪದ್ಮಾವತಿ, ಅಂಬಿಕಾ, ಸರಸ್ವತಿ ಹಾಗೂ ಬ್ರಹ್ಮ ಆರಾಧನೆ ಜೈನರಲ್ಲಿಯೇ ಹೆಚ್ಚು ಜನಪ್ರಿಯವಾಯಿತು.[6] ಈ ಅವಧಿಯಲ್ಲಿ ಬಸದಿಗಳಲ್ಲಿನ ಪೂಜಾವಿಧಾನವು ಹಿಂದೂ ದೇವಾಲಯಗಳಲ್ಲಿನ ಪೂಜಾ ವಿಧಾನವನ್ನೇ ಹೋಲುತ್ತಿತ್ತು. ಜಲ, ಗಂಧ, ಪುಷ್ಪ, ಅಕ್ಷತ, ಧೂಪ, ದೀಪ, ನೈವೇದ್ಯ, ತಾಂಬೂಲ ಈ ಅಷ್ಟವಿಧಾರ್ಚನೆಗಳು ರೂಢಿಯಲ್ಲಿದ್ದವು. ನೃತ್ಯಗೀತಾದಿ ಸೇವೆಗಳು ನಡೆಯುತ್ತಿದ್ದವು[7]. ಯಕ್ಷಿ ಆರಾಧನೆಯ ಮುಂದಿನ ಹೆಜ್ಜೆಯಾಗಿ ಜೈನ ಧರ್ಮದಲ್ಲಿ 'ತಾಂತ್ರಿಕ ಆರಾಧನೆ' ಪ್ರಬಲಿಸಿ ಅನೇಕ ಜೈನ ಭಟ್ಟಾರಕರು ಅಥವಾ ಮಠಾಧಿಪತಿಗಳು ಮಂತ್ರ, ತಂತ್ರ ಮುಂತಾದ ತಾಂತ್ರಿಕ ವಿಷಯಗಳಲ್ಲಿ ನಿರತರಾದರು[8]. ೧೧ನೇ ಶತಮಾನದಲ್ಲಿ ನಯಸೇನನ ಊರಾದ ಮುಳಗುಂದದ ಜೈನಗುರು ಮಲ್ಲಿಷೇಣ ಸೂರಿಯು ತಾಂತ್ರಿಕ ಆರಾಧಕನಾಗಿ ಭೈರವ ಪದ್ಮಾವತಿಕಲ್ಪ, ಜ್ವಾಲಿನೀಕಲ್ಪ, ಸರಸ್ವತೀ ಮಂತ್ರ ಕಲ್ಪ ಎಂಬ ಗ್ರಂಥಗಳನ್ನು ಬರೆದಿದ್ದಾನೆ.

ಈ ಯುಗದಲ್ಲಿ ಬಾಹ್ಯ ಆರಾಧನಾ ಪದ್ಧತಿಗಳು ಜೈನಧರ್ಮದಲ್ಲಿ ಯಥೇಚ್ಛವಾಗಿ ಕಾಣಿಸಿಕೊಂಡವು. ದೇವದಾಸಿ ಪದ್ಧತಿಯು ಜಿನಬಸದಿಗಳನ್ನು ಪ್ರವೇಶಿಸಿದುದರ ಬಗೆಗೆ ಶಾಸನಗಳಲ್ಲಿ ಉಲ್ಲೇಖ ಇದೆ. ಲೊಕ್ಕಿಗುಂಡಿಯಲ್ಲಿ ಅತ್ತಿಮಬ್ಬೆ ಕಟ್ಟಿಸಿದ ಬಸದಿಗಾಗಿ ಒಬ್ಬ ಸೂಳೆ ಇದ್ದು ಅವಳಿಗೂ ದಾನವನ್ನು ಬಿಡಲಾಗಿದೆ[9]. ಈ ಯುಗದಲ್ಲಿ ಜೈನ ಮತಾವಲಂಬಿಗಳಲ್ಲಿಯೂ ಡಾಂಭಿಕತೆ ಮತ್ತು ಭಿನ್ನತೆಗಳು ಕಾಣಿಸಿಕೊಂಡಿದ್ದವು ಎಂಬುದು ನಯಸೇನನ ಧರ್ಮಾಮೃತದಿಂದ ತಿಳಿದುಬರುತ್ತದೆ. "ಎಮ್ಮರಸಿ, ಎಮ್ಮ ಜಿನಗೃಹಂ, ಎಮ್ಮೊಡವೆಗಳ್, ಎಮ್ಮಗುಡ್ಡರ್, ಎಮ್ಮರ್ಥಂ, ಮತ್ತೆಮ್ಮ ನೆಲನೆಂದು.... ಮಾಣದೆ ನುಡಿವ ಮುನಿ ಮುನಿಯಲ್ಲ. ಜಿನಭವನಮೆಲ್ಲಮಂ ಸಜ್ಜನ ಚೈತ್ಯಾವಳಿ

---

6. ಎಸ್. ಶೆಟ್ಟರ್: ಭಾರತೀಯ ಹಿನ್ನೆಲೆಯಲ್ಲಿ ಕರ್ನಾಟಕದ ಧಾರ್ಮಿಕ ಸಾಮಾಜಿಕ ಜೀವನ ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ (ಸಂ|| ಜಿ. ಎಸ್. ಶಿವರುದ್ರಪ್ಪ) ಸಂ. 3, ಪುಟ 25.

7. ಎಂ.ಚಿದಾನಂದಮೂರ್ತಿ: ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪುಟ134.

8. ಅದೇ, ಪುಟ 102.

9. B. K. I, Vol. I No. 52, 1007 A. D.

ಗಳೆಲ್ಲಮಂ, ದಿವ್ಯತಪೋಧನರೆಲ್ಲರುಮಂ ಸಮನಾಗೆ ಅನವರತಂ ಕಾಣ್ಬ ಮುನಿಯೆ ಮುನಿವರನೆನಿಕುಂ,[10] ಎಂಬ ಹೇಳಿಕೆಗಳು ಆ ಕಾಲದಲ್ಲಿ ಜೈನಮುನಿಗಳಲ್ಲಿಯೇ ಪಂಗಡಗಳು ಉಂಟಾಗಿ ಇವು ನಮ್ಮ ಜಿನಗೃಹಂ, ಇವರು ನಮ್ಮ ಗುಡ್ಡರ್ ಎಂಬ ಪ್ರತ್ಯೇಕತಾ ಭಾವನೆ ತಲೆದೋರಿತ್ತು ಎಂಬುದಾಗಿ ತಿಳಿದು ಬರುತ್ತದೆ. ಸಾತ್ವಿಕವಾದ ವೈರಾಗ್ಯ ಮತ್ತು ಅಹಿಂಸೆಯನ್ನು ಪ್ರತಿಪಾದಿಸಿದ ಜೈನಧರ್ಮಕ್ಕೆ ಯಕ್ಷಿ ಆರಾಧನೆ, ತಂತ್ರ ಮಂತ್ರಗಳ ಆರಾಧನೆ ಇತ್ಯಾದಿ ತಾಮಸಿಕವಾದ ತಾಂತ್ರಿಕ ಆಚರಣೆಗಳು ಹೊಂದಿಕೊಳ್ಳದ ಆಚರಣೆಗಳಾದರೂ ಅನ್ಯಧರ್ಮಗಳ ಪ್ರಬಲ ಸ್ಪರ್ಧೆಗಳ ನಡುವೆ ಅಸ್ತಿತ್ವವನ್ನು ಉಳಿಸಿಕೊಳ್ಳಲು ಜನಸಾಮಾನ್ಯರನ್ನು ಆಕರ್ಷಿಸಲು ಮತ್ತು ಧರ್ಮವನ್ನು ಜನಪ್ರಿಯಗೊಳಿಸುವ ಉದ್ದೇಶ್ಯದಿಂದ ಈ ಸಲ್ಲದ ಆಚರಣೆಗಳನ್ನು ಅಳವಡಿಸಿಕೊಂಡಿತು ಎನ್ನಬಹುದು.

## ೩. ಜೈನಧರ್ಮ ಮತ್ತು ವೀರಶೈವ ಧರ್ಮಗಳ ನಡುವಿನ ಸಂಘರ್ಷ ಸಮನ್ವಯ ಗ್ರಹಿಕೆ.

ಜೈನಧರ್ಮ ಮತ್ತು ವೀರಶೈವ ಧರ್ಮಗಳು ವೈದಿಕ ಧರ್ಮಕ್ಕೆ ಪ್ರತಿರೋಧವಾಗಿ ಜನ್ಮತಾಳಿದವುಗಳಾಗಿದ್ದು ಈ ಉಭಯ ಮತಗಳಲ್ಲಿನ ಸೈದ್ಧಾಂತಿಕ ತತ್ವಗಳು ಮತ್ತು ಕೆಲವೊಂದು ಆಚರಣೆಗಳಲ್ಲಿ ಸಾಮ್ಯ ಇರುವುದು ಕಂಡುಬರುತ್ತದೆ. ನಿದರ್ಶನಕ್ಕೆ ಕೆಲವೊಂದನ್ನು ಸೂಚಿಸಲಾಗಿದೆ—

1. ಜೈನರ ವೃಷಭನಾಥನು ವೃಷಭಲಾಂಛನನಾಗಿರುವನು. ವೃಷಭನಾಥನ ಬಿಂಬದ ಪೀಠದಲ್ಲಿ ವೃಷಭ ಚಿಹ್ನೆ ಗೋಚರವಾಗಿರುವುದನ್ನು ಕಾಣಬಹುದು. ಅದೇ ರೀತಿ ಶೈವರ ಶಿವನನ್ನು ವೃಷಭನಾಥನೆನ್ನುವರು. ಶಿವಲಿಂಗದ ಮುಂದೆ ವೃಷಭ ಇರುವುದನ್ನು ಕಾಣಬಹುದು.
2. ಜೈನರ ಸಾಧನಾ ಮಾರ್ಗದಲ್ಲಿ 14 ಗುಣಸ್ಥಾನಗಳಿವೆ. 4ನೆಯ ಗುಣಸ್ಥಾನದಿಂದ ಸಾಧನೆಯಲ್ಲಿ ಆಧ್ಯಾತ್ಮಿಕತೆ ಪ್ರಾರಂಭವಾಗಿ 14ನೆಯ ಗುಣಸ್ಥಾನದಲ್ಲಿ ಸಾಧಕನು ಸಕಲ ಕರ್ಮಗಳನ್ನು ಕಳೆದುಕೊಂಡು ಸಿದ್ಧನಾಗಲು ಸನ್ನದ್ಧನಾಗುವನು.[11] ಹಾಗೆಯೇ ವೀರಶೈವ ಧರ್ಮದಲ್ಲಿ ಸಾಧಕನಿಗೆ ಅಷ್ಟಾವರಣಗಳು ಷಟ್‌ಸ್ಥಲಗಳು ಸಾಧನಾಮಾರ್ಗಗಳಾಗಿರುವುದನ್ನು ಕಾಣಬಹುದು.
3. ಜೈನರಲ್ಲಿ ಸಮವಸರಣ ಮಂಟಪ ಕಂಡುಬರುವ ಹಾಗೆ ವೀರಶೈವರಲ್ಲಿ ಅನುಭವಮಂಟಪ ಕಂಡುಬರುತ್ತದೆ. ಜೈನರಲ್ಲಿ ತ್ರಿಷಷ್ಟಿ ಶಲಾಕಾ ಪುರುಷರ

---

10. ನಯಸೇನನ ಧರ್ಮಾಮೃತ (ಸಂ. ದೇ.ಜ.ಗೌ.) 5-114, 5-116.
11. ಜಿ. ಬ್ರಹ್ಮಪ್ಪ : ಶ್ರಮಣ-ಶೈವ ಸಮನ್ವಯ, ಸತ್ಯಶುದ್ಧ ಕಾಯಕ. ಸಂ. 1, ಸಂ. 2, ಪುಟ 30.

ಕಥೆಗಳು ಕಂಡುಬರುವ ಹಾಗೆ ವೀರಶೈವರಲ್ಲಿ ಅರವತ್ತಮೂರು ಮಂದಿ ಪುರಾತನರ ಕಥೆಗಳು ಕಂಡುಬರುತ್ತವೆ.

4. ಜೈನ ಮತ್ತು ವೀರಶೈವ ಧರ್ಮಗಳು ವೇದಾನುಸರಣೆಯ ಧರ್ಮಗಳಲ್ಲ. ಅವೆರಡು ಆಗಮಾನುಸಾರಿ ಧರ್ಮಗಳಾಗಿವೆ. ವೀರಶೈವರಿಗೆ ಶೈವಾಗಮಗಳು ಮೂಲ. ಜೈನರಿಗೆ ಜಿನಾಗಮಗಳು ಮೂಲ[12].

5. ಭಾರತೀಯ ಸಂಸ್ಕೃತಿಯ ಪ್ರಾರಂಭಾವಸ್ಥೆಯಲ್ಲಿ ಶೈವ ಹಾಗೂ ಜೈನ ದರ್ಶನಗಳು ಒಮ್ಮುಖವಾಗಿ ಬೆಳೆದು ಜನರಲ್ಲಿ ತ್ಯಾಗಜೀವನ, ಸತ್ಯನಿಷ್ಠೆ, ಪ್ರಾಣಿದಯೆಗಳನ್ನು ಬೋಧಿಸಿದವು. ಭಾರತದ ಪ್ರಾಗೈತಿಹಾಸಿಕ ಕಾಲದ ಸಂಸ್ಕೃತಿಯನ್ನು ರೂಪಿಸಿದುವು[13]

ಈ ಉಭಯ ಮತಗಳಲ್ಲಿ ಮೇಲ್ಕಂಡ ರೀತಿಯಲ್ಲಿ ಸಾಮ್ಯ ಕಂಡುಬಂದರೂ ಅಸ್ತಿತ್ವದ ಸಲುವಾಗಿ ಮಧ್ಯಕಾಲೀನ ಯುಗದ ಧಾರ್ಮಿಕ ಪರಿಸರದಲ್ಲಿ ಇವೆರಡರ ನಡುವೆ ಘರ್ಷಣೆ ನಡೆದಿದೆ. ಒಂದು ರೀತಿಯಲ್ಲಿ ಈ ಯುಗದಲ್ಲಿ ಜೈನಧರ್ಮವು ಇಳಿಮುಖವಾಗಲು ಶೈವಧರ್ಮವು ಕಾರಣಕರ್ತವಾಯಿತು ಎಂಬುದಕ್ಕೆ ಆ ಕಾಲದ ಶಾಸನಗಳು ಮತ್ತು ಕಾವ್ಯಗಳು ನಿದರ್ಶನವಾಗಿವೆ. ಜನಸಾಮಾನ್ಯವರ್ಗದಿಂದ ಜನಸಾಮಾನ್ಯರಿಗಾಗಿಯೇ ಉದ್ಭವಗೊಂಡ ವೀರಶೈವ ಧರ್ಮವು ಸಾಮಾನ್ಯ ಜನತೆಯನ್ನು ಆಕರ್ಷಿಸುವಲ್ಲಿ ಸಫಲವಾಯಿತು. ಜೈನಧರ್ಮದಲ್ಲಿಯ ಕೆಲವು ವ್ಯಕ್ತಿಗಳು ಶೈವಮತಕ್ಕೆ ಮತಾಂತರಗೊಳ್ಳುವ ಹಂತಕ್ಕೆ ತಲುಪಿದ್ದರು ಎಂಬುದನ್ನು ಶಾಸನಗಳು ತಿಳಿಸುತ್ತವೆ. ಕ್ರಿ.ಶ. 1180ರ ಶಾಸನದ ಪ್ರಕಾರ ಜೈನಮತದ ವ್ಯಕ್ತಿಯೊಬ್ಬನು ಶಿವಧರ್ಮದ ಕಥನವನ್ನು ಕೇಳಿ ಆ ಧರ್ಮದ ಪ್ರಭಾವಕ್ಕೆ ಒಳಗಾಗಿ ಶಿವದೇವಾಲಯಕ್ಕೆ ದತ್ತಿ ನೀಡಿದುದಾಗಿ ತಿಳಿದುಬರುತ್ತದೆ.[14] ಕ್ರಿ.ಶ. 1055ರ ಕಾಲದ ಕೋಗಳಿ ಶಾಸನದಲ್ಲಿ' ತೊಲಗದೆ ಜೈನ ಮಾರ್ಗದೊಳ್ ನಿಶ್ಚಳರಪ್ಪುದು........ವೃತ್ತಿಮಾರ್ಕ್ಕೆ ಭವ್ಯರಂ[15]' ಎಂಬ ಉಲ್ಲೇಖ ಕಂಡುಬರುತ್ತದೆ.

ಒಂದು ಪ್ರಾಂತವನ್ನು ಆಳುತ್ತಿದ್ದ ಸಾಮಂತ ಅರಸನೊಬ್ಬನು ಮೊದಲು ಜೈನ ಮತಾನುಯಾಯಿಯಾಗಿದ್ದು ಅನಂತರ ಶೈವಮತಕ್ಕೆ ಮತಾಂತರ ಹೊಂದಿದ ಉಲ್ಲೇಖ ಈ ಅವಧಿಯ ಶಾಸನದಿಂದ ತಿಳಿದುಬರುತ್ತದೆ[16]. ವೀರಭದ್ರ ಸಂಪ್ರದಾಯದ ವೀರ

---

12. ಬಿ. ಬಿ. ಮಹೀಷವಾಡಿ : ಜೈನವಾಙ್ಮಯ ಪರಿಶೋಧನೆ, ಪುಟ 12.
13. ಮಿರ್ಜಿ ಅಣ್ಣಾರಾಯ : ಶೈವ–ಜೈನಧರ್ಮಗಳು, ಚಿತ್ರಭಿ (1972) ಪು. 415.
14. ಎ. ಕ. ಸಂ. VII, ಶಿಕಾರಿಪುರ, 40.
15. S. I. I. Vol. No. IX, Part 1, No. 117.
16. E. I. XIX, P. 192, 1121 A.D.

ಮಾಹೇಶ್ವರ ನಿಷ್ಠ ಉಗ್ರಮತಾನುಯಾಯಿಗಳಲ್ಲಿ ಕೆಲವರು ಜೈನ ಬಸದಿಗಳನ್ನು ಧ್ವಂಸಿಸಿ ವಿಗ್ರಹಗಳನ್ನು ನಾಶಮಾಡಿದ್ದುದರ ಬಗೆಗೆ ಈ ಅವಧಿಯ ಶಾಸನಗಳಲ್ಲಿ ಉಲ್ಲೇಖ ಇದೆ.

ಅಣ್ಣಿಗೇರಿಯ ಕ್ರಿ. ಶ. 1184ರ ಶಾಸನದಲ್ಲಿನ ವಿವರದಲ್ಲಿ ಗೊಗ್ಗಿದೇವ ಎಂಬ ಉಗ್ರಮಾಹೇಶ್ವರ ನಿಷ್ಠ ಶರಣನನ್ನು ಶಿವಧರ್ಮಕ್ಕೆ ತನ್ನ ಧನವನ್ನೆಲ್ಲಾ ಮೀಸಲಿಟ್ಟವನು ಎಂದು ಹೊಗಳಿ 'ಜೈನಮೃಗಬೇಂಟೆಕಾರ' 'ಜೈನಕುಠಾರ' ಎಂಬ ಮುಂತಾದ ವಿಶೇಷಣಗಳಿಂದ ಹೊಗಳಿ ಅವನು ಘಟಾಂತಕೀಯ ಮತ್ತು ಜಿನನ ವಿಗ್ರಹಗಳನ್ನು ಭಗ್ನಮಾಡಿದ ಉಲ್ಲೇಖ ಇದೆ.[17] ಧಾರವಾಡ ಜಿಲ್ಲೆಯ ಹಿರೇಕೆರೂರ ತಾಲೂಕಿನ ಅಬ್ಬಲೂರಿನಲ್ಲಿ ದೊರೆತಿರುವ ಶಾಸನಗಳು ಆ ಕಾಲದ ಜೈನಧರ್ಮದ ಪರಿಸ್ಥಿತಿಗೆ ಕನ್ನಡಿಯಾಗಿವೆ. ವೀರಮಾಹೇಶ್ವರ ನಿಷ್ಠ ಏಕಾಂತ ರಾಮಯ್ಯನ ಪವಾಡಗಳು ಜೈನರೊಡನೆ ಸೆಣಸಿ ವಿಜಯಿಯಾಗಿ ಜಿನಾಲಯವನ್ನು ಶಿವಾಲಯಗೊಳಿಸಿದ್ದು ಈತನ ಕ್ರಿಯೆಯನ್ನು ಶಿಲ್ಪಗಳ ಮೂಲಕ ನಿರೂಪಿಸಿರುವುದು ಶಾಸನಗಳಲ್ಲಿನ ಈ ವಿವರಗಳು ಜೈನಧರ್ಮ ಮತ್ತು ವೀರಶೈವ ಧರ್ಮಗಳ ನಡುವೆ ನಡೆದ ಹಿಂಸಾಮಟ್ಟದ ಘರ್ಷಣೆಯನ್ನು ತಿಳಿಸುತ್ತಿವೆ.

ರಾಜಾಶ್ರಯ ಮತ್ತು ಪ್ರಜಾನುರಾಗದ ನೆರವಿನೊಂದಿಗೆ ಪ್ರಬುದ್ಧಮಾನಕ್ಕೆ ಬಂದ ಶೈವಮತವು ಒಡ್ಡಿದ ಆಘಾತವನ್ನು ಪ್ರತಿಭಟಿಸಲಾಗದೆ ಅಸ್ತಿತ್ವದ ಸಲುವಾಗಿ ಜೈನಧರ್ಮವು ಹೊಂದಾಣಿಕೆಗಳನ್ನು ಮಾಡಿಕೊಂಡಿರುವುದರ ಬಗೆಗೆ ಶಾಸನಗಳಲ್ಲಿ ಆಧಾರ ಇದೆ. ಶೈವಧರ್ಮದ ನೇರವಾದ ಆಕ್ರಮಣಗಳು ಏಕಾಂತ ರಾಮಯ್ಯ, ಆದಯ್ಯ, ವಿರುಪರಸ, ಗೊಗ್ಗಿದೇವ ಮುಂತಾದ ಉಗ್ರ ಶರಣರಿಂದ ಜೈನಧರ್ಮದ ಮೇಲೆ ನಡೆಯಲು ಪ್ರಾರಂಭವಾದಾಗ ತನ್ನತನವನ್ನು ಉಳಿಸಿಕೊಳ್ಳಲು ಶೈವಮತಕ್ಕೆ ಮರೆಹೊಕ್ಕ ಪ್ರಸಂಗವನ್ನು ಈ ಕಾಲದ ಕೆಲವು ಶಾಸನಗಳಲ್ಲಿ ಗುರುತಿಸಬಹುದಾಗಿದೆ. ಈ ಅವಧಿಯಲ್ಲಿ ನಿರ್ಮಿಸಿದ ಜಿನಾಲಯಗಳನ್ನು ಎಕ್ಕೋಟಿ ಜಿನಾಲಯಗಳೆಂದು ಕರೆಯುವ ಪರಿಪಾಠ ರೂಢಿಗೆ ಬಂದಿತು. ಕಂಬದಹಳ್ಳಿ ಶಾಸನದಲ್ಲಿ[18] —"ಲಾಕುಳೀಶ್ವರ ಸಿದ್ಧಾಂತ ಕುಟುಂಬಿನಿ ದೀನಾನಾಥಯೂಥರುಂ ಸಪ್ತಕೋಟಿ ಸಮಾಗ್ರಗಣ್ಯರುಂ ಅಗಣ್ಯಪುಣ್ಯರು ಅನೇಕ ತೀರ್ತ್ಥಾವಗಾಹನ ಪವಿತ್ರೀಕೃತೋತ್ತಮಾಂಗರುಂ ಸೋಮಾಯಿಕ ನರ್ತಕ ನಟೀ ನಾಟ್ಯರಂಗರುಂ ಪಂಚಪ್ರಕಾರ ದೀಕ್ಷಾ ಕ್ರಿಯಾ ಪ್ರತಿಷ್ಠಿತರುಂ ಅಂನದಾನ ಸುವರ್ಣದಾನ ವಿನೋದರುಮಪ್ಪ ಏಳುಕೋಟಿ ಶ್ರೀ ರುದ್ರರಿಪ್ಪರ್ ಶ್ರೀ ಮೂಲಸಂಘ ದೇಸಿಗಣದ ಪುಸ್ತಕಗಚ್ಛದ ಕಂಬದಹಳ್ಳಿ ತೀರ್ತ್ಥವ ಎಕ್ಕೋಟಿ ಜಿನಾಲಯವೆಂದು ಪೆಸರುಂ, ಭೇರಿ ಪಂಚಮಹಾಶಬ್ದಮಂ ಎಕ್ಕೋಟಿ ಮಹಾರುದ್ರರಿಳ್ದು

17. P. B. Desai : Jainism in South India and some Jaina Epigraphe p.p. 397.

18. ಎ. ಕ. ಸಂ. 7, ನಾಗಮಂಗಲ, ನಂ. 31.

ಕೊಟ್ಟರು. ಆದನಾಗದೆಂದವಂ ಶಿವದ್ರೋಹಿಶ್ರೀ" ಎಂಬ ಉಲ್ಲೇಖ ಬರುತ್ತದೆ. ಇದರಿಂದ ಜಿನಾಲಯಗಳು ಜೋಗವಟ್ಟಿ, ನಂದೀಧ್ವಜ ಇತ್ಯಾದಿಗಳ ಪಡೆಯುವುದರ ಮೂಲಕ ರಕ್ಷಣೆಯ ಹೊಂದಾಣಿಕೆಯನ್ನು ಮಾಡಿಕೊಂಡಂತೆ ಕಂಡುಬರುತ್ತದೆ. ಈ ಒಂದು ಪರಿಸ್ಥಿತಿ ತುಂಗಭದ್ರೆಯ ದಕ್ಷಿಣಭಾಗಕ್ಕಷ್ಟೇ ಸೀಮಿತವಾಗದೆ ಉತ್ತರಭಾಗದಲ್ಲಿಯೂ ಕಂಡುಬರುತ್ತಿತ್ತು ಎಂಬುದಕ್ಕೆ ಶಾಸನಗಳು ಆಧಾರವನ್ನೊದಗಿಸುತ್ತವೆ.

ತೇರದಾಳ ಶಾಸನದಲ್ಲಿ—'ತೇರದಾಳ ನೇಮಿತೀರ್ಥೇಶ್ವರ ಜಿನಾಲಯವು ಹಿಂದೆ ಕೊಲ್ಲಾಪುರದ ರೂಪನಾರಾಯಣ ಬಸದಿಯ ಕಕ್ಷೆಯಲ್ಲಿತ್ತು. ಆದರೆ ಆ ಊರಿನ ಸಮಸ್ತ ನಕರಗಳ ಪ್ರಾರ್ಥನೆಯಂತೆ ಕೊಲ್ಲಾಪುರದ ಘಟಿಕಾ ಸ್ಥಾನದ ಅಚಾರ್ಯರು ಮತ್ತು ಎಕ್ಕೋಟಿ ಸಂಖ್ಯಾತ ಗಣಂಗಳು ಒಂದುಗೂಡಿ ಆ ಜಿನಾಲಯವನ್ನು ಅದೇ ಊರಿನ ಕಲಿದೇವ ದೇವಾಲಯಕ್ಕೆ ಪ್ರತಿಬದ್ಧಮಾಡಿದರು'—ಎಂಬ ವಿವರ ಇದೆ.[19] ಅಲ್ಲದೆ ಗೊಂಕ ಜಿನಾಲಯ ಹೊಸ ಒಪ್ಪಂದದಂತೆ ಅದರ ಆಚಾರ್ಯರಾಗಿದ್ದ ಪ್ರಭಾಚಂದ್ರ ಪಂಡಿತರಿಗೆ 'ಇಗ್ಗಳಿಯ ಜೋಗಪಟ್ಟಿಗೆಯ ಸ್ಥಾನವೆಂದು ಜೋಗವಟ್ಟಿಗೆಯ ನಿಕ್ಕಿದರೆಂದೂ, ಬಸದಿಯ ಮೇಲೆ ಶೂದ್ರಕನ, ಸಿಂಹದ, ಚಕ್ರದಾ ಚಿಹ್ನೆಗಳನ್ನು ಮತ್ತು ತ್ರಿಶೂಲದ ಘಂಟೆಯನ್ನು ಪಜಿತೆಯನ್ನು ಇಟ್ಟರೆಂದು ಇದನ್ನು ಒಪ್ಪದವನು ಏಳುಕೋಟಿ ತಾಪಸರಿಗೆ ಮಹಾವಿರೋಧಿ' ಎಂದು ತಿಳಿಸುತ್ತದೆ. ಈ ಶಾಸನದ ವಿವರವು 'ಅಂದು ನಡೆಯುತ್ತಿದ್ದ ಧಾರ್ಮಿಕ ಆಂದೋಲನದ ಚಿತ್ರವನ್ನು ಅಂಥ ದುರ್ಘಟನೆ ತೇರದಾಳ ಬಸದಿಗೆ ಒದಗಬಾರದೆಂಬ ಉದ್ದೇಶದಿಂದ ಶೈವರಕ್ಷಣೆಯನ್ನೇ ಬೇಡಿದ ಒಂದು ಸಂದರ್ಭವನ್ನು ನಿರೂಪಿಸುವುದರ ಮೂಲಕ[20]. ಹನ್ನೆರಡನೆ ಶತಮಾನದ ಉತ್ತರಾರ್ಧದಲ್ಲಿ ಉತ್ತರ ಕರ್ನಾಟಕದಲ್ಲಿ ಜೈನಧರ್ಮದ ಸ್ಥಿತಿಯನ್ನು ಸೂಚಿಸುತ್ತದೆ.

## ೪. ಅಸ್ತಿತ್ವದ ಸಲುವಾಗಿ ಅನ್ಯಮತಗಳೊಡನೆ ಜೈನಧರ್ಮ ನಡೆಸಿದ ಸಂಘರ್ಷ

ಸ್ಥಾನಭದ್ರತೆಯ ಸ್ಥಿರತೆಗಾಗಿ ಜೈನಧರ್ಮವು ಅನ್ಯಮತಗಳೊಡನೆ ಘರ್ಷಣೆಗೆ ತೊಡಗಿತ್ತು. ಜೈನಧರ್ಮವು ಅನ್ಯಧರ್ಮಗಳೊಂದಿಗೆ ನಡೆಸಿದ ಸಂಘರ್ಷವನ್ನು—

1. ವಾದ ವಿವಾದಗಳನ್ನೊಳಗೊಂಡ ವಿದ್ವತ್ತಿನ ಮಟ್ಟದಲ್ಲಿ ನಡೆಸಿದ ಘರ್ಷಣೆ.
2. ಧಾರ್ಮಿಕ ಮತ್ತು ಸಾಹಿತ್ಯಕ ಕೃತಿಗಳ ಮೂಲಕ ನಡೆಸಿದ ಘರ್ಷಣೆ.
3. ಜನಸಾಮಾನ್ಯರ ಮಟ್ಟದಲ್ಲಿ ನಡೆಸಿದ ಘರ್ಷಣೆ ಎಂದು ಮೂರು ಭಾಗಗಳಲ್ಲಿ ಗುರುತಿಸಲಾಗಿದೆ

---

19. K. I. Vol. 5. ಜಮಖಂಡಿ, 98, ಕ್ರಿ.ಶ. 1181.
20. ಎಸ್. ನಾಗರಾಜು : ಕರ್ನಾಟಕದ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಜೀವನ. ಕನ್ನಡ ಅಧ್ಯಯನ ಸಂಸ್ಥೆಯ ಸಾಹಿತ್ಯ ಚರಿತ್ರೆ, ಸಂ. 4(1), ಪು. 143.

**1. ವಿದ್ವತ್ತಿನ ಮಟ್ಟದಲ್ಲಿ ನಡೆದ ಘರ್ಷಣೆ :** ಜೈನಧರ್ಮವು ಉಚ್ಛ್ರಾಯ ಸ್ಥಿತಿಯಲ್ಲಿ ಇದ್ದಾಗಿನಿಂದ ಹಿಡಿದು ಈ ಯುಗದವರೆಗೂ ಜೈನದರ್ಶನಕ್ಕೂ ಇತರ ದರ್ಶನಗಳಿಗೂ ಆಸ್ಥಾನಗಳಲ್ಲಿ, ವಾದಮಂಟಪಗಳಲ್ಲಿ ವಿದ್ವತ್ತಿನ ಘರ್ಷಣೆ ನಡೆದಿದೆ. ಜೈನಯತಿಗಳನ್ನು ಸ್ತುತಿಸುವಾಗ ಕೆಲವೊಮ್ಮೆ ಪರವಾದಿ ಶರಭಭೇರುಂಡ ಎಂದು ಕರೆದಿದ್ದಾರೆ. 10ನೇ ಶತಮಾನದ ಶಾಸನವೊಂದರಲ್ಲಿ[21] 'ಬೌದ್ಧವಾದಿ ತಿಮಿರ ಪತಂಗರುಂ ಸಾಂಖ್ಯವಾದಿ ಕುಳಾದ್ರಿ ವಜ್ರಧರರುಂ'—ಇತ್ಯಾದಿ ವಿಶೇಷಣಗಳು ಜೈನಯತಿಗಳನ್ನು ಕುರಿತು ಇವೆ. ನಂದಿಪಂಡಿತ ದೇವರಿಗೆ 'ಪರವಾದಿ ಶರಭ ಭೇರುಂಡ' ಎಂಬುದು ಮತ್ತೊಂದು ಹೆಸರಾಗಿತ್ತು. ವಾದಿ ವಜ್ರಾಂಕುಶ ಎಂದು ಹೆಸರಾದ ಶುಭಕೀರ್ತಿಗಳು ಬೌದ್ಧರನ್ನು ಮೀಮಾಂಸಕರನ್ನು ಸೋಲಿಸಿದ್ದರ ಬಗೆಗೆ ಶಾಸನಗಳಲ್ಲಿ ಉಲ್ಲೇಖ[22] ಇದೆ. ಕನಕನಂದಿ ಎಂಬುವರು ವಾದಿ ವಿಷೋರಗ ತಾರ್ಕ್ಷ್ಯರ್ ಆಗಿದ್ದರು ಎಂದು ಶಾಸನವು[23] ಉಲ್ಲೇಖಿಸಿದೆ. ಕ್ರಿ.ಶ. 1163ರ ಶ್ರವಣಬೆಳ್ಗೊಳದ ಶಾಸನವು[24] ದೇವಕೀರ್ತಿಮುನಿ ಜೈನಾಚಾರ್ಯನನ್ನು ಹೊಗಳುತ್ತ 'ಬೌದ್ಧಮದವೇದಂಡ' ಎಂದು ಸ್ತುತಿಸಿದೆ.

**2. ಧಾರ್ಮಿಕ ಮತ್ತು ಸಾಹಿತ್ಯ ಕೃತಿಗಳ ಮೂಲಕ ನಡೆಸಿದ ಸಂಘರ್ಷ**

ಮಧ್ಯಕಾಲೀನ ಧಾರ್ಮಿಕ ಪರಿಸರದಲ್ಲಿ ಜೈನಧರ್ಮದ ಸ್ಥಿರತೆಯಲ್ಲಿ ಬಿರುಕು ಉಂಟಾದ್ದರಿಂದ ಮತ್ತು ಆಗತಾನೆ ಆವಿರ್ಭಾವಕ್ಕೆ ಬಂದ ನೂತನ ಮತಧರ್ಮಗಳ ನಡುವೆ ಸ್ಪರ್ಧಾತ್ಮಕ ಮನೋಭಾವನೆ ಉಂಟಾದ್ದರಿಂದ ಅಸ್ತಿತ್ವವನ್ನು ರಕ್ಷಿಸುವಂತಹ ಪ್ರಯತ್ನಗಳು ನಡೆಯಬೇಕಾಗಿತ್ತು. ಈ ಯುಗದ ಆಳರಸರು ಶೈವ ಇಲ್ಲವೇ ವೈಷ್ಣವ ಮತಕ್ಕೆ ನೆರವು ನೀಡಿದ್ದರಿಂದ ಜೈನಧರ್ಮಕ್ಕೆ ಪೂರ್ವದಿಂದಲೂ ಒದಗಿದ್ದ ರಾಜಾಶ್ರಯದ ನೆರವು ತಪ್ಪಿ ಬಲ ಕುಂದಲು ಕಾರಣವಾಯಿತು. ಇಂತಹ ಸಂಧಿಗ್ದ ಪರಿಸ್ಥಿತಿಯಲ್ಲಿ ಜೈನಮತದ ಬಗೆಗೆ ಒಲವುಳ್ಳ ವ್ಯಕ್ತಿಗಳು ಜನಸಾಮಾನ್ಯರಲ್ಲಿ ಜೈನಮತದ ಮಹತ್ವವನ್ನು ವಿವರಿಸಿ ನಂಬಿಕೆಯನ್ನುಂಟುಮಾಡುವ ದಿಶೆಯಲ್ಲಿ ಕಾರ್ಯತತ್ಪರರಾದರು. ನಯಸೇನನ ಧರ್ಮಾಮೃತದಲ್ಲಿನ ಮೊದಲ ದರ್ಶನದ ಕಥೆಯಲ್ಲಿ ಬ್ರಾಹ್ಮಣನೊಬ್ಬನನ್ನು ಜೈನಧರ್ಮಕ್ಕೆ ಪರಿವರ್ತಿಸಿದ ವಿವರ ಬರುತ್ತದೆ. ಸ್ಥಿತಿಕರಣದ ಕಥೆಯಲ್ಲಿಯೂ ಬ್ರಾಹ್ಮಣನು ಜೈನಧರ್ಮಕ್ಕೆ ಪರಿವರ್ತನೆಗೊಂಡ ವಿಷಯ ಇದೆ. ಕೆಲವು ಕಥೆಗಳು ವೈದಿಕಧರ್ಮ ಮತ್ತು ಜೈನಧರ್ಮಗಳ ನಡುವೆ ನಡೆದ ಶ್ರೇಷ್ಠತೆಯ

---

21. M. A. R. [1923] pp. 114, 990 A. D.
22. E. C. Vol. No, II 69, 1100 A. D.
23. I. A. Vol. XIV, P. 14' 1124 A. D.
24. M. A. R. [1933] pp. 219.

ವಾಗ್ವಾದಗಳನ್ನು ಪ್ರತಿಬಿಂಬಿಸುತ್ತವೆ. ವೈದಿಕ ಧರ್ಮದ ಜೊತೆಗೆ ಶೈವ ಶಾಖೆಯಾದ ಕಾಳಾಮುಖರ ವಿಡಂಬನೆಯನ್ನು ಈ ಕೃತಿಯಲ್ಲಿ ಕಾಣಬಹುದು. ಜೈನಧರ್ಮದ ಶ್ರಾವಕರ ಕಟ್ಟುಪಾಡುಗಳಲ್ಲಿ ಶೈಥಿಲ್ಯ ಉಂಟಾಗಿತ್ತು. ಮುನಿಗಳ ಆಚರಣೆಯಲ್ಲಿ ಶಿಥಿಲತೆ ಉಂಟಾಗಿತ್ತು. ಜೈನಧರ್ಮದಿಂದ ಜನತೆ ಶೈವಧರ್ಮಕ್ಕೆ ಪರಿವರ್ತನೆಗೊಳ್ಳಲಾರಂಭಿಸುವಂತಹ ಪರಿಸ್ಥಿತಿ ಏರ್ಪಟ್ಟಿತ್ತು. ಇಂಥ ಪರಿಸ್ಥಿತಿಯಲ್ಲಿ ಜೈನಧರ್ಮೀಯರಲ್ಲಿಯೇ ಮತಶ್ರದ್ಧೆಯನ್ನು ಸ್ಥಿರೀಕರಿಸುವುದಕ್ಕಾಗಿ ಅದರ ಮೇಲ್ಮೈಯನ್ನು ಎತ್ತಿ ತೋರಿಸುವುದಕ್ಕಾಗಿ ಜನರಿಗೆ ಸುಲಭವಾಗಿ ಅರ್ಥವಾಗಬಲ್ಲ ಸರಳ ಸುಂದರ ಸಹಜ ಭಾಷೆಯಲ್ಲಿ ಕಥೆಗಳ ಮೂಲಕ ಅಥವಾ ಬೇರೆ ರೀತಿಯಿಂದ ಜೈನಧರ್ಮದ ತಿರುಳನ್ನು ಪ್ರಸಾರ ಮಾಡಬೇಕಾಯಿತು.[25] ಬ್ರಹ್ಮ ಶಿವನ ಸಮಯ ಪರೀಕ್ಷೆಯಂತೂ ಅನ್ಯಮತಗಳನ್ನು ಖಂಡಿಸಿ ಜೈನಧರ್ಮದ ಶ್ರೇಷ್ಠತೆಯನ್ನು ತೋರಲು ಬರೆದ ಕೃತಿಯಾಗಿದೆ. ಈ ಮತೀಯ ಕಾವ್ಯದಲ್ಲಿ ಸಮಕಾಲೀನ ಪರಿಸ್ಥಿತಿಗೆ ಜೈನಧರ್ಮಕ್ಕೆ ಆಘಾತವನ್ನುಂಟುಮಾಡಿದ ಶೈವ-ವೈಷ್ಣವ ಮತಗಳ ವಿಡಂಬನೆಯನ್ನು ಕಾಣಬಹುದು. ಈ ಯುಗದಲ್ಲಿ ಬೇರೆ ಮತಧರ್ಮಗಳಲ್ಲಿನ ಆಚರಣೆ ಸಂಪ್ರದಾಯಗಳು ಜೈನರಲ್ಲಿಯೂ ಪ್ರಭಾವ ಬೀರಿ ಅವರು ಅನ್ಯಧರ್ಮೀಯರ ಸಂಪ್ರದಾಯಗಳನ್ನು ಆಚರಣೆಗೆ ತಂದಿರಬೇಕು. ಅಂತಹ ಜೈನರನ್ನು ಎಚ್ಚರಿಸುವಂತಹ ಕಾಯಕವನ್ನು ಬ್ರಹ್ಮಶಿವನು ತನ್ನ ಕೃತಿಯ ಮೂಲಕ ನಿರ್ವಹಿಸಿದ್ದಾನೆ. ಈ ಯುಗದಲ್ಲಿಯೇ ಆದಯ್ಯನು ಪುಲಿಗೆರೆಯ ಸುರಹೊನ್ನೆಯ ಬಸದಿಗೆ ತಂದು ಪ್ರತಿಷ್ಠಾಪಿಸಿದ ಸೋಮೇಶ್ವರ ವಿಗ್ರಹದ ಬಗೆಗೆ

ಪುಲಿಗೆರೆಯಲ್ಲಿ ಮುಂ ವೃಷಭವಾಹನ ಯಕ್ಷನನಾದಿ ಕಾಲದೊಳ್
ನೆಲದೊಳೆ ಪೂಳ್ದುದಂ ಬೆರಟ ಕಂಡದ ನೊರ್ಮೆಯೆ ನಂದಿವಾಹನಂ
ನೆಲದೊಳಗಿರ್ದರುದ್ರನೊಗೆ ತಂದನಿದಲ್ತೆ ಸ್ವಯಂಭುವೆಂದು ಗಾ
ವಿಲರಿದನೀಗಳ ರ್ಚಿಸುವರೇನದು ತಮ್ಮ ಸ್ವಯಂಭು ಲಿಂಗವೆ[26] —

ಎಂದು ತನ್ನ ಕೃತಿಯಲ್ಲಿ ಸಾರಸಗಟಾಗಿ ತಿರಸ್ಕರಿಸಿದ್ದಾನೆ.

ವೃತ್ತ ವಿಲಾಸನು ಈ ಯುಗಕ್ಕನುಗುಣವಾಗಿ ಪರಧರ್ಮಗಳನ್ನು ವಿಡಂಬಿಸುತ್ತಾನೆ. ಜೈನಧರ್ಮದ ತತ್ವಗಳನ್ನು ತನ್ನ ಧರ್ಮಪರೀಕ್ಷೆಯಲ್ಲಿ ಪ್ರತಿಪಾದಿಸಿದ್ದಾನೆ. ಈ ಕಾಲದಲ್ಲಿ ಜೈನಧರ್ಮಕ್ಕೆ ಸ್ಪರ್ಧೆಯನ್ನು ನೀಡಿದ ಶೈವಧರ್ಮದ ವಿರುದ್ಧದ ವಿಡಂಬನೆಯನ್ನು ಈ ಕೃತಿಯಲ್ಲಿ ಕಾಣುವುದಿಲ್ಲ. ವೈದಿಕಮತದ ವಿಡಂಬನೆಯ ಜೊತೆಗೆ ಜಿನಮತದ ಪ್ರಸಾರವನ್ನು ಕಾಣಬಹುದು. ಆಂಡಯ್ಯನ 'ಕಬ್ಬಿಗರ ಕಾವ' ಕೃತಿಯು ಜೈನಮತ ಪ್ರಸಾರದ ಹಿನ್ನೆಲೆಯಲ್ಲಿ ಮೂಡಿಬಂದ ಕೃತಿಯಾಗಿದೆ. ಶಿವನ ಗೆಲುವನ್ನು ಪ್ರತಿಪಾದಿಸುವ ಶೈವಪರಂಪರೆಗೆ ಪ್ರತಿಯಾಗಿ ಜಿನಾಧೀನನಾದ ಕಾಮನ ಗೆಲುವನ್ನೂ ಶಿವನ ಸೋಲನ್ನೂ ಪ್ರತಿಪಾದಿಸುವ ಅಂಶವನ್ನು ಈ ಕೃತಿಯಲ್ಲಿ ಕಾಣಬಹುದು.

---

25. ಬಿ. ವ್ಹಿ ಮಲ್ಲಾಪುರ : ನಯಸೇನ ಮತ್ತು ಅವನ ಕೃತಿಗಳು ಪು. 40.
26. ಸಮಯಪರೀಕ್ಷೆ [ಸಂ॥ ಬಿ. ಎಸ್. ಕುಲಕರ್ಣಿ] ಸಂ, 2, ಪ.ಸಂ. 67.

ಆ ಮೂಲಕ ಜೈನಧರ್ಮದ ಗೆಲುವನ್ನು ಕುರಿತಿದ್ದಾಗಿದೆ. ಶಾಂತಿನಾಥ ಕವಿಯು ವಡ್ಡಾರಾಧನೆಯಲ್ಲಿ ಬರುವ ಸುಕುಮಾರ ಚರಿತ್ರೆಯೊಂದನ್ನೇ ತನ್ನ ಕಾವ್ಯಕ್ಕೆ ವಸ್ತುವನ್ನಾಗಿ ತೆಗೆದುಕೊಂಡು ಆ ಕೃತಿಯ ಮೂಲಕ ಜೈನಧರ್ಮದ ತತ್ವಗಳನ್ನು ಸರಳವಾಗಿ ನಿರೂಪಿಸಿದ್ದಾನೆ.

3. ಜನಸಾಮಾನ್ಯರ ಮಟ್ಟದಲ್ಲಿ ನಡೆದಂತಹ ಘರ್ಷಣೆಯು ಜೈನಧರ್ಮವು ಶೈವ ಧರ್ಮದೊಡನೆ ನಡೆಸಿದ್ದಾಗಿದೆ. ಇದನ್ನು ಹಿಂದೆಯೇ ಸೂಚಿಸಲಾಗಿದೆ. ಇಲ್ಲಿ ಬುದ್ಧಿಗಿಂತ ಸಾಮಾನ್ಯ ಜನರ ಹೃದಯವನ್ನು ಗೆಲ್ಲಬೇಕು. ಹೀಗಾಗಿ ಬರಿಯ ಮಾತಿನಿಂದಲ್ಲದೆ ತೋಳ್ಬಲದಿಂದಲೂ ಪರವಾದಿಗಳನ್ನು ಗೆಲ್ಲಬೇಕಾಗಿತ್ತು. ಈ ರೀತಿಯ ಘರ್ಷಣೆಯು ಹಿಂಸೆಯ ಪ್ರತೀಕವಾಗಿದೆ. ಜೈನಧರ್ಮವು ವಿದ್ವತ್ತಿನ ಮಟ್ಟದಲ್ಲಿ ನಡೆದ ಘರ್ಷಣೆಯಲ್ಲಿ ಗೆದ್ದಿತಾದರೂ ಜನಸಾಮಾನ್ಯರ ಮಟ್ಟದಲ್ಲಿ ನಡೆದ ಘರ್ಷಣೆಯಲ್ಲಿ ಪರಾಜಯವನ್ನು ಹೊಂದಿತು—ಎನ್ನಬಹುದು. ಜೈನರು ಅಹಿಂಸೆಯನ್ನು ಒಂದು ನೈತಿಕ ಮೌಲ್ಯವನ್ನಾಗಿ ಸ್ವೀಕರಿಸಿಯೇ ಹಿಂಸೆಯ ಆಕ್ರಮಣಕ್ಕೆ ಮಧ್ಯಕಾಲೀನ ಯುಗದಲ್ಲಿ ಒಳಗಾದರು ಎನ್ನಬಹುದು. ಇತರರು ಜೈನರನ್ನು ಹತ್ತಿಕ್ಕಿದ್ದಕ್ಕೆ ಅನೇಕ ಉದಾಹರಣೆಗಳನ್ನು ಕೊಡಬಹುದಾದರೂ ಇದಕ್ಕೆ ಜೈನರು ಪ್ರತೀಕಾರವನ್ನು ಒಮ್ಮೆಯೂ ಕೈಗೊಂಡದ್ದಕ್ಕೆ ಉದಾಹರಣೆಗಳು ದೊರಕದಿರುವುದು ಗಮನಾರ್ಹ ಸಂಗತಿ.[27] ಹೀಗೆ ಜೈನಧರ್ಮದಲ್ಲಿ ಹೋರಾಟದ ಸ್ವಭಾವದ ಕೊರತೆ ಕಂಡುಬಂದುದರಿಂದ ಮಿಲಿಟೆಂಟಾಗಿರುವ ಅನ್ಯಧರ್ಮಗಳ ವಿರುದ್ಧ ಈ ಯುಗದಲ್ಲಿ ನಿಲ್ಲಲಾರದೆ ಹೋಯಿತು ಎನ್ನಬಹುದು.

## ಮಧ್ಯಕಾಲೀನ ಪರಿಸರದಲ್ಲಿ ಜೈನಧರ್ಮಕ್ಕೆ ಉಂಟಾದ ಆಘಾತ

ಅನ್ಯಮತಗಳ ಘರ್ಷಣೆಯ ಸಲುವಾಗಿ ಅನೇಕ ಜಿನಬಸದಿಗಳು ಶೈವ ಮತ್ತು ವೈಷ್ಣವ ದೇವಾಲಯಗಳಾಗಿ ಪರಿವರ್ತನೆಗೊಂಡವು. ಐಹೊಳೆಯ ಮೇಗುಟಿ ಶಾಸನ ಇರುವ ಕಟ್ಟಡವು ಮೊದಲು ಜಿನಬಸದಿಯಾಗಿದ್ದು ಕ್ರಮೇಣ ಶೈವ ದೇಗುಲವಾಗಿ ಪೂಜೆಯಿಲ್ಲದೆ ಹಾಳುಸ್ಥಿತಿಯಲ್ಲಿದೆ.[28] ಶಾಸನವೊಂದರ ಮೇಲಿನ ಮತ್ತು ಕೆಳಗಿನ ಶಿಲ್ಪಗಳು ಮತ್ತು ಶಾಸನದ ಆರಂಭ ವಿಷಯವು ಜಿನಶಾಸನವೆಂದು ಸೂಚಿಸಿದರೆ ಶಾಸನದ ಮಧ್ಯಭಾಗದಿಂದ ಕೊನೆಯವರೆಗೆ ಹನ್ನೆರಡನೆಯ ಶತಮಾನದಲ್ಲಿ ಯಾರೋ ಭೋಗೇಶ್ವರ ದೇವರಿಗೆ ಎಣ್ಣೆ ಬತ್ತಗಳನ್ನು ಕೊಟ್ಟ ವಿಷಯವನ್ನು ಸೇರಿಸಿದ್ದಾರೆ.[29]

---

27. D. S. Sharma : Jainism and Kannada culture, pp. 150.
28. ಎಂ. ಚಿದಾನಂದಮೂರ್ತಿ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. 106.
29. I. A. Vol. XII, pp. 224, 916-17 A. D.

ಅಂದರೆ ಜೈನ ಶಾಸನವನ್ನು ಶೈವಶಾಸನವನ್ನಾಗಿ ಈ ಯುಗದಲ್ಲಿ ಪರಿವರ್ತಿಸಿದ್ದಾರೆ. ಹೊಳೆನರಸೀಪುರ ತಾಲೂಕಿನ ಅಂಕನಾಥಪುರದಲ್ಲಿನ ಶಾಸನಗಳೆಲ್ಲಾ ಜೈನಶಾಸನಗಳು. ಈಗ ಅಲ್ಲಿರುವವು ಶೈವಾಲಯಗಳು. ಪ್ರಾಚೀನಕಾಲದ ನಿಸದಿಗಲ್ಲು ಬಸವಣ್ಣ ಗುಡಿಯ ಒಂದು ತೊಲೆಯಾಗಿದೆ.[30] ನರಗುಂದ ತಾಲೂಕಿನ ಕೊಣ್ಣೂರಿನ ಈಗಿನ ಪರಮೇಶ್ವರ ದೇವಾಲಯ ಮೂಲತಃ ಜೈನ ಮಂದಿರವಾಗಿದ್ದಿತು ಎಂಬುದನ್ನು ವಿದ್ವಾಂಸರು ಶಾಸನ ಮತ್ತು ಶಿಲ್ಪಗಳ ಆಧಾರದಿಂದ ತೋರಿಸಿದ್ದಾರೆ.[31] ಪುಲಿಗೆರೆಯ ಪ್ರಸಿದ್ಧ ಸುರಹೊನ್ನೆ ಬಸದಿಯನ್ನು ಈ ಅವಧಿಯಲ್ಲಿಯೇ ಜೈನಧರ್ಮವು ಕಳೆದುಕೊಂಡಿತು. ನಾಗರಖಂಡ ಎಪ್ಪತ್ತರ ಅಬ್ಬಲೂರು, ಹಿರೇಕೊಣತಿ, ಹಿರೇಅಣಜಿ, ಚಿಕ್ಕೆರೂರ ಮುಂತಾದ ಪ್ರದೇಶ ಗಳಲ್ಲಿ ಅನೇಕ ಜೈನಬಸದಿಗಳು, ಮಾನಸ್ತಂಭಗಳು ಶಿಥಿಲವಾಗಿವೆ. ಈಗ ಅಲ್ಲಿರುವ ದೇವಾಲಯಗಳೆಲ್ಲವೂ ಶಿವಾಲಯಗಳೇ ಆಗಿವೆ. ಅಬ್ಬಲೂರು ಪರಿಸರದಲ್ಲಿ ಏಕಾಂತ ರಾಮಯ್ಯನಂತಹ ಉಗ್ರಮಾಹೇಶ್ವರ ನಿಷ್ಠ ಶರಣರುಗಳಿಂದ ಜೈನಧರ್ಮವು ಬಲವಾದ ಆಘಾತವನ್ನು ಅನುಭವಿಸಿತ್ತು ಎಂಬುದನ್ನು ಶಾಸನಗಳು, ಶಿಲ್ಪಗಳು, ಕಾವ್ಯಗಳು ಮಾರ್ನುಡಿಯುತ್ತವೆ. 8 ರಿಂದ 10ನೇ ಶತಮಾನದವರೆಗೆ ಪ್ರಸಿದ್ಧ ಜೈನ ಕ್ಷೇತ್ರ ವಾಗಿದ್ದ ಕೊಪ್ಪಳವು ಈ ಅವಧಿಯಲ್ಲಿಯೇ ಶೈವಮಠವಾಗಿ ಪರಿವರ್ತಿತವಾಗಿರಬೇಕು. ಬೆಳಗಾವಿ ಜಿಲ್ಲೆಯ ಬೈಲಹೊಂಗಲ ತಾಲೂಕಿನ ಈಶಾನ್ಯ ಭಾಗದಲ್ಲಿ ನೇಸರಿಗಿಯ ಸಮೀಪ ಇರುವ ವಣ್ಣೂರು ಗ್ರಾಮದ ಶಿವದೇವಾಲಯವು ಮೂಲತಃ ಜಿನಾಲಯ ವಾಗಿದ್ದಿತು ಎಂಬುದು ಅದರ ಅಧ್ಯಯನದಿಂದ ತಿಳಿದುಬರುತ್ತದೆ.

ಮಧ್ಯಕಾಲೀನ ಧಾರ್ಮಿಕ ಪರಿಸರದಲ್ಲಿ ಜೈನಧರ್ಮದ ಅಸ್ತಿತ್ವಕ್ಕೆ ಆಘಾತ ವಾದರೂ ಒಂದು ರೀತಿಯಲ್ಲಿ ಕನ್ನಡ ಸಾಹಿತ್ಯಕ್ಕೆ ಲಾಭವಾಯಿತೆಂದೇ ಹೇಳಬಹುದು. ಸಾಹಿತ್ಯಕ ಸ್ವರೂಪ ಧಾರ್ಮಿಕ ಆಂದೋಲನದಿಂದ ಬದಲಾವಣೆ ಆಗುತ್ತದೆ ಎಂಬು ದಕ್ಕೆ ಜೈನಧರ್ಮವನ್ನು ನಾವು ಉದಾಹರಿಸಬಹುದು. ಜೈನಕವಿಗಳಲ್ಲಿ ಸಂಸ್ಕೃತದ ಹಂಗನ್ನು ತೊರೆದು ಸುದ್ದಗನ್ನಡವನ್ನೆ ಕಾವ್ಯದ ಭಾಷೆಯನ್ನಾಗಿ ಮಾಡಬೇಕೆಂಬ ಕಳಕಳಿ ಮೂಡಿಬಂದುದು ಈ ಮಧ್ಯಕಾಲೀನ ಯುಗದಲ್ಲಿಯೇ, ಅದರಲ್ಲಿಯೂ ನಯ ಸೇನ, ಆಂಡಯ್ಯ ಮುಂತಾದವರ ಕಾವ್ಯಗಳಲ್ಲಿ. ಜೈನಧರ್ಮವು ಅಸ್ತಿತ್ವಕ್ಕಾಗಿ ಅನ್ಯ

---

30. ಎ. ಕ. ಸಂ. 5, ಹೊಳೆನರಸೀಪುರ, ಸಂ. 112, ಕ್ರಿ.ಶ. 1120.

31. ಅ, ಸುಂದರ : ಉತ್ತರ ಧಾರವಾಡ ಜಿಲ್ಲೆಯ ಕ್ರಿ. ಶ. 9–10ನೇ ಶತಮಾನದ ದೇವಾಲಯಗಳು ಮತ್ತು ಹೊಯ್ಸಳ ವಾಸ್ತುಶಿಲ್ಪ ಸಾಧನೆ, ಸಂ. 1 ಸಂ. 2, ಪುಟ 106.

ಧರ್ಮಗಳೊಂದಿಗೆ ಸೆಣಸಾಟಕ್ಕೆ ಇಳಿದಂತಹ ಈ ಕಾಲದಲ್ಲಿ ನಯಸೇನನಂತಹ ಕವಿಗಳಿಗೆ ಜೈನಧರ್ಮ ಉಳಿಯಬೇಕಾದರೆ ಅದರ ತತ್ವಗಳನ್ನು ಜನರ ಆಡುಮಾತಿನಲ್ಲಿ ಅವರಿಗೆ ತಿಳಿಯುವಂತಹ ರೀತಿಯಲ್ಲಿ ಹೇಳಬೇಕು ಎಂಬ ಅರಿವು ಮೂಡಿತು. ಹೀಗಾಗಿ 'ಸಂಸ್ಕೃತ ವಿರೋಧಿ ದೇಸಿಪರ ಭಾವನೆ' ಮೂಡಿಬಂದಿತು. ನಯಸೇನನು ಕಾವ್ಯ ರಚಿಸುವ ವೇಳೆಗೆ ಒದಗಿದಂತಹ ಪರಿಸ್ಥಿತಿ ಜೈನಧರ್ಮಕ್ಕೆ ಪಂಪರನ್ನಾದಿಗಳ ಕಾಲ ದಲ್ಲಿಯೇ ಒದಗಿದ್ದರೆ ಕನ್ನಡ ಕಾವ್ಯದಲ್ಲಿ ದೇಸಿಧೋರಣೆ ಅಂದೇ ಹುಟ್ಟುತ್ತಿತ್ತು ಎಂದು ಹೇಳಬಹುದು. ಜೈನಧರ್ಮದ ಕವಿಗಳು ಸುದ್ದಗನ್ನಡಕ್ಕೆ ನಿಜವಾಗಿ ಒಲಿದಿದ್ದು ಮಧ್ಯಕಾಲೀನ ಯುಗದಲ್ಲಿಯೇ ಎಂಬುದನ್ನು ಗಮನಿಸಬೇಕು.

ಮಧ್ಯಕಾಲೀನ ಯುಗದ ವೇಳೆಗೆ ಜೈನಧರ್ಮವು ಅಸ್ತಿತ್ವದಲ್ಲಿ ಸಡಿಲತೆಯನ್ನು ಪಡೆದುಕೊಂಡರೂ, ಕನ್ನಡ ಸಾಹಿತ್ಯ-ಸಂಸ್ಕೃತಿಗೆ ನೀಡಿರುವ ಕಾಣಿಕೆ ಅಪಾರವಾದುದು. ವಾಸ್ತುಶಿಲ್ಪಕ್ಕೆ ತನ್ನದೇ ಆದ ಕೊಡಿಗೆ ನೀಡಿದೆ. ಭಾರತೀಯ ಸಂಸ್ಕೃತಿಗೆ ಕರ್ನಾಟ ಕವು ನೀಡಿರುವ ಕೊಡಿಗೆಗಳಲ್ಲಿ ಬಹುಪಾಲು ಜೈನಧರ್ಮದ್ದಾಗಿದೆ.

——

# ಗೊಟ್ಟಿಗೆಹಳ್ಳಿಯಲ್ಲಿ ಬೃಹತ್ ಶಿಲಾಯುಗದ ಶಿಲಾ ಸಮಾಧಿಗಳು-ಹೊಸ ಶೋಧ

—ಮುತ್ತುರಾಜು

ಗೊಟ್ಟಿಗೆಹಳ್ಳಿಯು ಕನಕಪುರ ತಾಲೂಕು ಹಾರೋಹಳ್ಳಿಯಿಂದ 9 ಕಿ. ಮಿ. ದೂರದಲ್ಲಿರುವ ಒಂದು ಹಳ್ಳಿ. ಇದು ದೊಡ್ಡರೆ, ಬಯಣ್ಣರೆ, ಮುನಿಕಲ್ಲುಬೆಟ್ಟ ಮತ್ತು ಮಾಸ್ತಿಕಲ್ಲು ಬೆಟ್ಟಗಳ ನಡುವೆ ಇದೆ. ('ಗೊಟ್ಟು' ಎಂದರೆ The state of being hard to get or very scarce) ಎಂದು ಅರ್ಥವಿದೆ.[1] ದಟ್ಟವಾದ ಕಾಡು ಈ ಹಳ್ಳಿಯ ಸುತ್ತಲೂ ಇದೆ.

ಈ ಹಳ್ಳಿಯ ಸುತ್ತಲೂ ಬೃಹತ್ ಶಿಲಾಯುಗದ (ಕ್ರಿ.ಪೂ. 800) ಸುಮಾರು ಮುನ್ನೂರು ಶಿಲಾ ಸಮಾಧಿಗಳು ಇದ್ದು ಇವುಗಳನ್ನು ಸ್ಥಳೀಯ ಜನರು ಪಾಂಡವರ ಗುಡಿಗಳು ಎಂದು ಕರೆಯುತ್ತಾರೆ. ಈ ಹಳ್ಳಿಯ ದಕ್ಷಿಣಕ್ಕೆ ಸುಮಾರು ಒಂದು ಫರ್ಲಾಂಗು ದೂರದಲ್ಲಿ ಬಯಣ್ಣರೆ ಎಂಬ ವಿಸ್ತಾರವಾದ ಕಲ್ಲುಗುಡ್ಡವಿದೆ. ಅಲ್ಲಿ ಸುಮಾರು 30ಕ್ಕೂ ಹೆಚ್ಚು ಶಿಲಾ ಸಮಾಧಿಗಳಿದ್ದು ಬಹುತೇಕವಾಗಿ ಹಾಳಾಗಿದ್ದು 12 ಶಿಲಾಸಮಾಧಿಗಳು ಮಾತ್ರ ಸುಸ್ಥಿತಿಯಲ್ಲಿವೆ.

ಈ ಶಿಲಾಸಮಾಧಿಗಳನ್ನು ನಾಲ್ಕು ಮೂಲೆಗಳಿಗೂ ತುಂಡು, ತುಂಡು ಕಲ್ಲುಗಳನ್ನು ಒಂದರಮೇಲೊಂದರಂತೆ ಜೋಡಿಸಿ ಮೇಲೆ ವಿಸ್ತಾರವಾದ ಮುಚ್ಚಳಿಕೆ ಕಲ್ಲನ್ನು ಮುಚ್ಚಿಮಾಡಿದ್ದಾರೆ. ಕೆಲವು ಶಿಲಾಸಮಾಧಿಗಳಿಗೆ ಮೂರುಕಡೆ ಮಾತ್ರ ತುಂಡು ಕಲ್ಲುಗಳ ಆಸರೆಯನ್ನು ಕೊಟ್ಟು ಮೇಲೆ ಮುಚ್ಚಳದ ಕಲ್ಲುಗಳನ್ನು ಹಾಕಿದ್ದಾರೆ. ಕೆಲವು ಶಿಲಾಸಮಾಧಿಗಳಿಗೆ ಒಳಗೆ ನೆಲದಮೇಲೆ ಹಾಸುಚಪ್ಪಡಿಗಳು ಇದ್ದರೆ ಇನ್ನು ಕೆಲವಕ್ಕೆ ಇಂತಹ ನೆಲದ ಹಾಸುಗಲ್ಲು ಇರುವುದಿಲ್ಲ, ಮತ್ತು ಶಿಲಾಸಮಾಧಿಗಳ ಸುತ್ತಲೂ ಸಣ್ಣ-ಸಣ್ಣ ಕಲ್ಲುಗಳ ಆಸರೆಯನ್ನು ಕೊಟ್ಟಿದ್ದಾರೆ.

ಇಲ್ಲಿ ದೊರೆತಿರುವ ಅತಿದೊಡ್ಡ ಶಿಲಾಸಮಾಧಿಯ ಮುಚ್ಚಳಿಕೆ ಕಲ್ಲಿನ ಅಳತೆ ಉದ್ದದಲ್ಲಿ 350 ಸೆಂ.ಮೀ ಗಳು, ಅಗಲ 275 ಸೆಂ.ಮೀ.ಗಳು, ದಪ್ಪ 33 ಸೆಂ.ಮೀ. ಗಳು ಇದೆ. ಈ ಮುಚ್ಚಳಿಕೆ ಕಲ್ಲು ನೆಲದಿಂದ 75 ಸೆಂ.ಮೀಗಳ ಮೇಲಿದೆ. ಅತಿಚಿಕ್ಕ

1. ಕಿಟ್ಟೆಲ್ ಕನ್ನಡ–ಇಂಗ್ಲೀಷ್ ನಿಘಂಟು, ಪುಟ 566.

ಶಿಲಾಸಮಾಧಿಯ ಉದ್ದ 145ಸೆಂ.ಮೀ., ಅಗಲ 84ಸೆಂ.ಮೀ.ಗಳು. ಪ್ರಾಯಶಃ ಇದು ಮಗುವಿನ ಸಮಾಧಿ ಇರುವಂತಿದೆ. ಒಂದು ಕಡೆ ಒಂದರ ಪಕ್ಕದಲ್ಲಿ ಮತ್ತೊಂದು ಸಮಾಧಿ ಇದ್ದರೆ ಮತ್ತೆ ಕೆಲವು ಕಡೆ ಬಿಡಿಬಿಡಿಯಾಗಿವೆ.

ದೊಡ್ಡರೆಯು ಗೊಟ್ಟಿಗಹಳ್ಳಿಯಿಂದ ಪೂರ್ವಕ್ಕೆ ಸುಮಾರು ಅರ್ಧ ಫರ್ಲಾಂಗು ದೂರದಲ್ಲಿದೆ. ಇಲ್ಲಿ ನಾಲ್ಕು ಶಿಲಾಸಮಾಧಿಗಳು ಇವೆ. ಅವುಗಳಲ್ಲಿ ಎರಡು ರಚನೆಯಲ್ಲಿ ತೊಟ್ಟಿಯ ಆಕಾರದಲ್ಲಿವೆ. ನಾಲ್ಕು ಕಡೆಗಳಿಗೂ ನಾಲ್ಕು ಕಲ್ಲು ಚಪ್ಪಡಿಗಳನ್ನು ಅಡ್ಡವಾಗಿ ನಿಲ್ಲಿಸಿ ಮೇಲೆ ಮುಚ್ಚಳಿಕೆ ಕಲ್ಲನ್ನು ಇರಿಸಿದ್ದು, ಮುಂಭಾಗದ ಕಲ್ಲು ಚಪ್ಪಡಿಯಲ್ಲಿ ಒಳಗೆ ಕಾಣಲು ಸ್ವಲ್ಪವೇ ಜಾಗವಿದೆ. ಈ ಶಿಲಾಸಮಾಧಿಗಳು ಯೆಲಹಂಕದ ಬಳಿಯ ಚಿಕ್ಕಜಾಲದಲ್ಲಿ ದೊರೆತಿರುವ ಬೃಹತ್ ಶಿಲಾಯುಗದ ಶಿಲಾಸಮಾಧಿಗಳನ್ನೂ ಮತ್ತು ಸಾವನದುರ್ಗ, ಬೆಂಗಳೂರಿನ ಬಳಿಯ ಕಣ್ಣೂರುಗಳಲ್ಲಿ ದೊರೆತಿರುವ ಶಿಲಾಸಮಾಧಿಗಳನ್ನು ಹೋಲುತ್ತವೆ. ಮತ್ತೆರಡು ಸಮಾಧಿಗಳಿಗೆ ಈಗಾಗಲೆ ದೊಡ್ಡರೆಯಲ್ಲಿ ಸಿಕ್ಕಿರುವ ಶಿಲಾಸಮಾಧಿಗಳಂತೆ ಸುತ್ತಲೂ ಆಸರೆಗಾಗಿ ತುಂಡು ಕಲ್ಲುಗಳನು ಎತ್ತರಕ್ಕೆ ಜೋಡಿಸಿ ಮುಚ್ಚಳಿಕೆ ಕಲ್ಲಿದೆ.

ಮುನಿಕಲ್ಲು ಬೆಟ್ಟವು ಗೊಟ್ಟಿಗೆಹಳ್ಳಿಯಿಂದ ಉತ್ತರಕ್ಕೆ ಸುಮಾರು 2 ಕಿ. ಮೀ. ದೂರದಲ್ಲಿರುವ ಚಿಕ್ಕಬೆಟ್ಟ. ಇಲ್ಲಿ ಸುಮಾರು ಇನ್ನೂರ ಐವತ್ತಕ್ಕೂ ಹೆಚ್ಚು ಶಿಲಾಸಮಾಧಿಗಳು ಕಂಡುಬಂದಿದ್ದು ರಚನೆಯಲ್ಲಿ ಇವುಗಳು ವಿವಿಧ ಬಗೆಯವುಗಳಾಗಿವೆ. ತುಂಡು, ತುಂಡು ಕಲ್ಲುಗಳನ್ನು ಒಂದರ ಮೇಲೊಂದರಂತೆ ನಾಲ್ಕು ಮೂಲೆಗಳಲ್ಲೂ ಇರಿಸಿ ಮೇಲೆ ಮುಚ್ಚಳಿಕೆ ಕಲ್ಲನ್ನು ನಿಲ್ಲಿಸಿದ್ದು ಒಳಗೆ ಭೂಮಿಯ ಮೇಲೆ ಹಾಸುಗಲ್ಲೊಂದನ್ನು ಹಾಸಿ, ಪಕ್ಕದಲ್ಲಿ ಸಣ್ಣ ಸಣ್ಣ ಕಲ್ಲುಗಳನ್ನು ಹಾಕಿದ್ದಾರೆ. ಇವುಗಳೂ ಸಹ ಈಗಾಗಲೆ ದೊರೆತಿರುವ ದೊಡ್ಡರೆ, ಬಯೆಣ್ಣರೆಗಳ ಶಿಲಾಸಮಾಧಿಗಳನ್ನು ಹೋಲುತ್ತವೆ. ಕೆಲವು ಶಿಲಾಸಮಾಧಿಗಳಿಗೆ ಸುತ್ತಲೂ ತುಂಡು ಕಲ್ಲುಗಳ ಎತ್ತರದ ಆಸರೆಗೆ ಮೇಲೆ 250 ಸೆಂ.ಮೀ. ಗೂ ಹೆಚ್ಚಿನ ಉದ್ದದ ಮುಚ್ಚಳಿಕೆ ಕಲ್ಲುಗಳನ್ನು ಇರಿಸಿದ್ದಾರೆ. ಇವುಗಳು ಸ್ವಾಭಾವಿಕವಾಗಿ ದೊರೆಯುವ ಕಲ್ಲುಚಪ್ಪಡಿಗಳಾಗಿದ್ದು ಕೃತಕವಾಗಿ ಮಾಡಿದವುಗಳೋ ಎಂಬಂತಿವೆ. ಮತ್ತೆ ಕೆಲವು ಸಮಾಧಿಗಳನ್ನು ಕಮಾನಾಕಾರದ ತುಂಡು ಕಲ್ಲುಗಳ ಎತ್ತರದ ಸಾಲಿಗೆ ಮುಂದೆ ಒಂದು ಸಾಲು ಇಂತಹುದೆ ತುಂಡು ಕಲ್ಲುಗಳ ಎತ್ತರದ ಸಾಲನ್ನು ನಿಲ್ಲಿಸಿ ಮೇಲೆ ಮುಚ್ಚಳಿಕೆ ಕಲ್ಲನ್ನು ಹಾಕಿ ಮಾಡಲಾಗಿದೆ. ಇನ್ನೂ ಕೆಲವು ಶಿಲಾಸಮಾಧಿಗಳಿಗೆ ವಿಸ್ತಾರವಾದ ಮುಚ್ಚಳಿಕೆ ಕಲ್ಲಿಗೆ ಕೆಳಗೆ ಸುತ್ತಲೂ ಸಣ್ಣ. ಸಣ್ಣ ಕಲ್ಲುಗಳ ಆಸರೆಯನ್ನು ಕೊಟ್ಟು ಒಳಭಾಗಕ್ಕೆ ಸ್ವಲ್ಪವೇ ಜಾಗ ಬಿಟ್ಟಿದೆ. ಇವುಗಳಿಗೆ ಒಳಭಾಗದ ಭೂಮಿಯ ಮೇಲೆ ಕಲ್ಲು ಚಪ್ಪಡಿಯ ಹಾಸು ಇರುವುದಿಲ್ಲ. ಇದೇ ರೀತಿ ಇನ್ನೂ ಹಲವು ಶಿಲಾ ಸಮಾಧಿಗಳಿದ್ದು,

ಕಮಾನಾಕಾರದಲ್ಲಿ ಸುತ್ತಲೂ ತುಂಡು ಕಲ್ಲುಗಳ ಆಸರೆಕೊಟ್ಟು ಮೇಲೆ ಮುಚ್ಚಳದ ಕಲ್ಲನ್ನು ಹಾಸಿದ್ದರೂ ಮುಂಭಾಗ ಖಾಲಿ ಇದೆ.

ಕೆಲವು ಶಿಲಾಸಮಾಧಿಗಳಿಗೆ ವೃತ್ತಾಕಾರದ ತುಂಡು ಕಲ್ಲುಗಳ ಎತ್ತರವಾದ ಆಸರೆಯನ್ನು ಹಾಕಿ ಮೇಲೆ ಮುಚ್ಚಳಿಕೆ ಕಲ್ಲನ್ನು ಹಾಕಿದ್ದರೂ ಒಳಭಾಗವನ್ನು ಸಣ್ಣ ಸಣ್ಣ ಚಪ್ಪಡಿಗಳಿಂದ ಜೋಡಿಸಿ ನಿರ್ಮಾಣ ಮಾಡಿರುವ ಕೌಶಲ ಗಮನಸೆಳೆಯುತ್ತದೆ. ಶಿಲಾಸಮಾಧಿಯೊಂದರ ಮುಂಭಾಗದ ಬಳಿಯಲ್ಲೇ ಒಂದು ಸಣ್ಣ ಗುಳಿಯೊಂದು ಇದ್ದು ಇದು ಆಳತೆಯಲ್ಲಿ ಉದ್ದ 38 ಸೆಂ.ಮೀ. ಅಗಲ 38 ಸೆಂ.ಮೀ. ಗಳಾಗಿದ್ದು ಅದರ ಸುತ್ತಲೂ ಸಣ್ಣ ಸಣ್ಣ ಚಕ್ಕೆ ಕಲ್ಲುಗಳನ್ನು ನಿಲ್ಲಿಸಿ ನೀರು ನಿಲ್ಲುವ ಆಸರೆಗಾಗಿ ನಿರ್ಮಾಣಮಾಡಿರುವಂತಿದೆ.

ಮುನಿಕಲ್ಲು ಬೆಟ್ಟದ ಎದುರುಕಡೆ ಇರುವ ಮಾಸ್ತಿಕಲ್ಲು ಬೆಟ್ಟದಲ್ಲಿಯೂ ಇಂತಹುದೇ ಹಲವಾರು ಶಿಲಾಸಮಾಧಿಗಳಿವೆ. ಮುನಿಕಲ್ಲು ಬೆಟ್ಟದ ಶಿಲಾಸಮಾಧಿಗಳಲ್ಲಿ ಕೆಂಪು ಮತ್ತು ಬೂದುಬಣ್ಣದ ಮಣ್ಣಿನಪಾತ್ರೆಯು ದೊರೆತಿದ್ದು ಹೊಳಪುಳ್ಳದ್ದಾಗಿದ್ದು ಹಗುರವಾಗಿದೆ. ಸಣ್ಣ ಅಂಚಿನಿಂದ ಕೂಡಿದೆ. ಸಣ್ಣ ಕುಡಿಕೆಯ ಚೂರೊಂದು ಸಿಕ್ಕಿದ್ದು ಇದೂ ಸಹ ತೆಳುವಾಗಿದೆ. ಅಲ್ಲದೆ ಹೊಳಪುಳ್ಳ ಕಪ್ಪುಬಣ್ಣದ ಮತ್ತು ಕೆಂಪುಬಣ್ಣದ ಮಡಕೆ ಚೂರುಗಳು, ಬೂದು ಬಣ್ಣದ ಮಡಕೆಯ ಚೂರುಗಳು, ದಪ್ಪ ತುಟಿಯ ಅಂಚುಳ್ಳ ಮಡಕೆಯ ಭಾಗಗಳೂ, ಒಳಭಾಗದಲ್ಲಿ ಕಪ್ಪು ಮತ್ತು ಮೇಲೆ ಕೆಂಪು ಬಣ್ಣ ಇರುವ ಮಡಕೆಯ ಚೂರುಗಳು, ಕಪ್ಪು-ಕೆಂಪು ಮಡಕೆಯ ಚೂರುಗಳು ದೊರೆತಿವೆ. ಇವುಗಳ ಜೊತೆಯಲ್ಲಿ ಮಧ್ಯದಲ್ಲಿ ಉಂಗುರಾಕಾರದ ರಂಧ್ರ ಇರುವ ದುಂಡಾದ ಮಣ್ಣಿನ ವಸ್ತುವೊಂದು ದೊರೆತಿದ್ದು ಕೆಂಪು ಮಣ್ಣಿನಿಂದ ಮಾಡಿದ ಈ ವಸ್ತುವಿಗೆ ಮೇಲೆ ಬಿಳಿಯ ಬಣ್ಣವನ್ನು ಲೇಪಿಸಿದ್ದಾರೆ. ಸುಟ್ಟ ಮಣ್ಣಿನ ವಸ್ತು ಇದಾಗಿದ್ದು ಇದನ್ನು ಯಾವ ಉದ್ದೇಶಕ್ಕಾಗಿ ಬಳಸುತ್ತಿದ್ದರೆಂದು ಊಹಿಸುವುದು ಕಷ್ಟವಾಗಿದೆ.*

ಪಾದ್ದಾರೆಕಲ್ಲು, ರಾಗಳಿಕಲ್ಲು, ಮನಗಲ್ಲು, ಮುನಿನಗರಬೆಟ್ಟ, ಮಾಸ್ತಿಕಲ್ಲು ಬೆಟ್ಟ, ಮುತ್ರಾಯನಕಲ್ಲು, ಕೊಂಬಿನಕಲ್ಲು, ಜೇನು ಕಲ್ಲುಗಳಿಂದ ಆವರಿಸಿರುವ ಗೊಟ್ಟಿಗೆಹಳ್ಳಿಯು ಒಂದು ಬೃಹತ್ ಶಿಲಾಯುಗದ ಸ್ಥಳವಾಗಿದ್ದು ಈ ಶಿಲಾಯುಗದ ಕಾಲ ಸುಮಾರು ಕ್ರಿ. ಪೂ. 800 ಎಂದು ಗೊಟ್ಟಿಗೇಹಳ್ಳಿಯಿಂದ ಸುಮಾರು 12 ಕಿ.ಮೀ.

---

* ಈ ಕೆಲವು ವಸ್ತುಗಳನ್ನು ಪ್ರತಿಷ್ಠಾನದಲ್ಲಿ ಸಂರಕ್ಷಿಸಲಾಗಿದೆ.

ದೂರದಲ್ಲಿರುವ ಬನ್ನೇರುಘಟ್ಟ ಮತ್ತು ಸುತ್ತಮುತ್ತ ದೊರೆತಿರುವ ಇಂತಹುದೇ ಬೃಹತ್ ಶಿಲಾಯುಗದ ಸ್ಥಳಗಳನ್ನು ತಮ್ಮ ಒಂದು ಲೇಖನದಲ್ಲಿ ಪ್ರಕಟಿಸಿರುವ ಡಾ॥ ದೇವರ ಕೊಂಡಾರೆಡ್ಡಿಯವರು ಊಹಿಸಿದ್ದಾರೆ.[2]

ಬೃಹತ್ ಶಿಲಾಯುಗದ ಸಮಾಧಿ ಸ್ಥಳಗಳು ಈ ಸುತ್ತಮುತ್ತಲೂ ಬೆಳಕಿಗೆ ಬಂದಿರುವುದು ಆ ಭಾಗವೆಲ್ಲಾ ಬೃಹತ್ ಶಿಲಾಯುಗದ ಸಂಸ್ಕೃತಿಗೆ ಒಳಪಟ್ಟಿತ್ತೆಂಬುದನ್ನು ಸಮರ್ಥಿಸುತ್ತದೆ.

* ಈ ಲೇಖನ ಬರೆಯಲು ಪ್ರೋತ್ಸಾಹಿಸಿದ ಪೂಜ್ಯ ಗುರುಗಳಾದ ಡಾ॥ ದೇವರ ಕೊಂಡಾರೆಡ್ಡಿಯವರಿಗೂ ಮಿತ್ರರಾದ ಶಿ. ರಾಜೇಂದ್ರಪ್ಪನವರಿಗೂ, ಸ್ಥಳ ಸೂಚನೆಯನ್ನು ನೀಡಿದ ವಿದ್ಯಾರ್ಥಿಗಳಾದ ಅನಿಲ್‌ಕುಮಾರ್, ಮತ್ತು ಸುನಿಲ್‌ಕುಮಾರ್ ಅವರಿಗೂ ಕ್ಷೇತ್ರ ಕಾರ್ಯದಲ್ಲಿ ನೆರವಾದ ಶಿವಮಲ್ಲೇಗೌಡರಿಗೂ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

....—

2. ಬನ್ನೇರುಘಟ್ಟ : ಪ್ರಾಗೈತಿಹಾಸಿಕ ಕಾಲದಿಂದ ಇಂದಿನವರೆಗೆ–ಇತಿಹಾಸದರ್ಶನ, ಸಂಪುಟ, 8, 1993, ಪುಟ, 2.

# ಸಾಹಿತ್ಯ ಕುತೂಹಲ : ಪ್ರತಿಕ್ರಿಯೆಗೆ ಪ್ರತಿಕ್ರಿಯೆ

—ಪಿ. ವಿ. ಜೋಶಿ

ನಾನು ಪಂಡಿತನಲ್ಲ, ಸಾಹಿತ್ಯ ನನಗೆ ಕೇವಲ ಒಂದು ಮನೋವಿನೋದ. ನನ್ನಂಥವನ ಕುತೂಹಲಕ್ಕೆ ಗರ್ಗೇಶ್ವರಿಯವರಂತಹ ಪಂಡಿತರು ಪ್ರತಿಸ್ಪಂದಿಸಿರುವುದಕ್ಕೂ ನಾನು ಕೃತಜ್ಞ. ವಾದವನ್ನು ಬೆಳಸುವ ಧಾರ್ಷ್ಟ್ಯ ನನಗೆ ಸಲ್ಲದು, ಆದರೂ ಪಂಡಿತ ಪ್ರಪಂಚದ ವಿಸ್ತಾರವೂ ನನಗೊಂದು ಕುತೂಹಲವೇ. ಆ ವಿಸ್ತಾರವನ್ನು ನೋಡಿ ಸುಖಿಸುವುದಕ್ಕೆ ಮತ್ತೆ ಪ್ರತಿವಾದಗಳನ್ನು ಮಂಡಿಸುತ್ತೇನೆ.

ಪಂಪನ ಪದ್ಯವನ್ನು ಅರ್ಥಮಾಡುವಲ್ಲಿ ಪ್ರಸ್ತುತವಾದದ್ದು "ನಿಚುಲ" ಪದದ ಅರ್ಥವಲ್ಲ. "ಆರು" ಪದದ ಅರ್ಥ. ಅಮರಕೋಶದ ಪದಗಳನ್ನು ಎಲ್ಲಿ ಬಿಡಿಸಬೇಕು? ನಿಚುಲಃ ಎಂಬುದನ್ನು ಕಂಟಕಿಫಲಃ ಜತೆಗೆ ಓದಬೇಕೋ ? "ವೇತಸ"ದ ಜತೆಗೆ ಓದಬೇಕೋ ? ನನಗೆ ತೋರುವದು ಹೀಗೆ : "ಪನಸ" ಎಂಬುದು ಸಂಕೇತನಾಮ, ದೇಶಿ ಭಾಷೆಯ "ಹಲಸು" ಪದದ ರೂಪಾಂತರ, ಅದರ ಲಕ್ಷಣ "ಕಂಟಕಿ ಫಲ" ಮತ್ತು "ನಿಚುಲ". ಚುದ್, ಚುರ್, ಚುಲ್, ಎಂಬ ಸಂಸ್ಕೃತ ಕ್ರಿಯಾಪದಗಳಿಗೆ ಮುಂದೆ ಸರಿಸು, ಧರಿಸು, ಹುಟ್ಟಿಸು ಇತ್ಯಾದಿ ಅರ್ಥಗಳನ್ನು ಹೇಳಬಹುದು. ಮೊದಲು ಹೂವು ಹುಟ್ಟಿ ಅದು ಹಣ್ಣನ್ನು ಹುಟ್ಟಿಸುತ್ತದೆ, ಧರಿಸುತ್ತದೆ ಎಂಬುದು ಸಾಮಾನ್ಯ ಸಂಗತಿ. ಅದಕ್ಕೆ ಹೊರತಾದ ಹಣ್ಣು "ನಿಚುಲ" ಇದೂ ಪನಸದ ಇನ್ನೊಂದು ಲಕ್ಷಣ. ಹಾಗೆಯೇ "ವೇತಸ" ಸಾಂಕೇತಿಕ ನಾಮ. ದೇಶಭಾಷೆಯ "ಬೆತ್ತ"ದ ರೂಪಾಂತರ. ಅದರ ವ್ಯಾಖ್ಯಾನ "ಅಂಬುಜ" ನೀರಲ್ಲಿ ಹುಟ್ಟಿದ್ದು ಇತ್ಯಾದಿ. ಎರಡನೆಯದಾಗಿ ನನಗೆ ಸಾಹಿತ್ಯಪಾಠ ಹೇಳಿದ ಉಪಾಧ್ಯಾಯರು ನನ್ನ ತಲೆಯಲ್ಲಿ "ಪದಮೈತ್ರಿ" ಎಂಬ ಒಂದು ಕಲ್ಪನೆಯನ್ನು ಹಾಕಿದ್ದಾರೆ. ಹಾಗೆ ಪಂಪನ ಪದ್ಯವನ್ನು ಓದುವಾಗ ತೆಂಕಣ ಗಾಳಿ ಸೋಂಕಿದೊಡಂ.ಒಳ್ನುಡಿಗೇಳ್ದೊಡಂ....ಇತ್ಯಾದಿ ಪದಗಳೊಡನೆ"ಆರಂಕುಸಮಿಟ್ಟೊಡಂ" ಎಂಬ ಪದಪುಂಜಕ್ಕೆ ಅರ್ಥ ಹೇಳುವದರಲ್ಲಿ ಪದಮೈತ್ರಿ ಇದೆ. ಅಂತಹ ಅರ್ಥ ಅಸಂಭವವಾದರೆ ಮಾತ್ರ "ಯಾರು ಅಡ್ಡಿಯಾದರೂ" ಎಂದು ಎಳೆದುತಂದು ಅರ್ಥ ಹೇಳಬಹುದು. ಸೃಷ್ಟಿಯಲ್ಲಿ ರಮ್ಯವಾದ ವಸ್ತುಗಳನ್ನು ಕಂಡಾಗ ಮನಸ್ಸಿನಲ್ಲಿ ನಾನು ಪಡುವ ಸಂತೋಷಕ್ಕೆ ಬೇರೆಯವರೇಕೆ ಅಡ್ಡಿಯಾಗಬೇಕು ? ರಾಜ ಸಭೆಯಲ್ಲಿರುವಾಗ ನನಗೆ ಹಲಸಿನಮರ ಕಾಣಿಸುವದು ಹೇಗೆ ? ಮತ್ತು ಬನವಾಸಿ ನಾಡು, ಮಾವಿನಮರಗಳು, ತೆಂಕಣಗಾಳಿಗಳನ್ನು ಗಮನಿಸಿದ ಪಂಪ ಹಲಸಿನ ಮರದ ವೈಭವವನ್ನು ಗಮನಿ

ಸದೆ ಇರುವದು ಸಾಧ್ಯವೇ ? ಮತ್ತೂ ಒಂದು ವಿಚಾರ "ಆರ" ಎಂಬುವ ಪದ "ಆಲ" ಎಂಬ ಪದಕ್ಕೆ ಹತ್ತಿರವಾಗಿಲ್ಲವೆ ? ಹಲಸಿನ ಮರದ ಎಲೆಗಳೂ ಆಲದ ಮರದ ಎಲೆಗಳಂತೆಯೇ ಇರುವವಲ್ಲ ! ಆಲದ ಮರಕ್ಕಿರುವಂತೆ ಹಲಸಿನ ಮರಕ್ಕೂ ಹಾಲು ಇದೆಯಲ್ಲ ! ಆದ್ದರಿಂದ ಒಂದು ಆರ ಒಂದು ಆಲ, ಏಕಾಗಿರಬಾರದು ?

ಶಾಕುಂತಲದ ವಿಚಾರ : ಕೋಮಲೆಯರು ಕೆಲಮಟ್ಟಿಗೆ ಕಾಠಿಣ್ಯವನ್ನು ರೂಢಿಸಿಕೊಂಡು ಗೃಹಿಣಿಯರಾಗುತ್ತಾರೆಂಬ ಸೋಜಿಗದಲ್ಲಿ "ಎಲ್ಲ ತಾಯಂದಿರೂ ಇದನ್ನು ಮಾಡುತ್ತಾರೆ" ಅಂದರೇನು ? ಎಲ್ಲ ತಾಯಂದಿರೂ ಮೊದಲು ಕೋಮಲೆಯರಾದ ಯುವತಿಯರೇ. ಆಗಿರುವರಲ್ಲವೆ ? ಮತ್ತು "ಆಧಿ" ಪದವು ಆಧಾರವೆಂಬ ಅರ್ಥದಲ್ಲಿ ಬಳಕೆಯಾದದ್ದು ಕಂಡಿಲ್ಲ ಎಂಬುದು ಇನ್ನೊಂದು ಆಕ್ಷೇಪ. "ಕುಲಸ್ಯಾಧಯಃ" ಎಂಬಲ್ಲಿಯ ಸವರ್ಣಧೀರ್ಘಸಂಧಿಯಲ್ಲಿ ಕುಲಸ್ಯ + ಅಧಯಃ ಆಗಬಹುದು ಕುಲಸ್ಯ + ಆಧಯಃ ಆಗಬಹುದು. ಅ ಆ ಸ್ವರಗಳು ಒಂದಕ್ಕೊಂದು ಬದಲಾಗುವದು ಸಾಮಾನ್ಯ. "ಅಧಿ" ಎಂದರೆ ಮೊದಲು ಹುಟ್ಟಿದ್ದು ಎಂಬ ಪ್ರಯೋಗ "ಧಾತಾಯಥಾ ಪೂರ್ವಮಕಲ್ಪಯತ್" ಎಂದು ಸೃಷ್ಟಿಕ್ರಮವನ್ನು ವರ್ಣಿಸುವ ಮಂತ್ರದಲ್ಲಿ ಬರುತ್ತದೆ. "ತಪಸೋ ಅಧಿ ಅಜಾಯತ" ಅದರಿಂದ ರಾತ್ರಿ ಹುಟ್ಟಿತು. "ಅರ್ಣವಾದ್ ಅಧಿ ಸಂವತ್ಸರೋಜಾಯತ್" ಇತ್ಯಾದಿ. ನಮ್ಮ ಕನ್ನಡವಲ್ಲಿಯೇ "ಹದಿ" ಎಂಬ ಪದವಿದೆಯಲ್ಲ ! ಅದು "ಅಧಿ" ಶಬ್ದದ ತದ್ಭವವೆಂದು ಹೇಳಬಹುದಲ್ಲವೆ ? ಕೋಮಲೆಯಾಗಿದ್ದ ಹುಡುಗಿ ಇಂದು ಗೃಹಿಣಿಯಾಗುವಳಲ್ಲ ಎಂಬ ವಿಸ್ಮಯವನ್ನೂ ಸಂತೋಷವನ್ನೂ ವ್ಯಕ್ತಪಡಿಸಬೇಕಾದ ಗಳಿಗೆಯಲ್ಲಿ ಶಂಕೆ, ಭೀತಿಗಳನ್ನು ತೋರುವ ಪ್ರತೀಪದರ್ಶನ ಕಣ್ವರ ಪಕ್ವವಾದ ಮನಸ್ಥಿತಿಯಲ್ಲಿ ಯುಕ್ತವೇ ? ಯಾಂತ್ಯೇವಂ ಗೃಹಿಣೀ ಪದಂ ಯುವತಯಃ ಎಂಬಲ್ಲಿ ಒಂದು ವಾಕ್ಯ ಮುಗಿಯುತ್ತದೆ. ವಾಮಾಃ ಕುಲಸ್ಯಾಧಯಃ ಎಂಬ ಪದಗಳನ್ನು ಯುವತಯಃ ಪದಕ್ಕೆ ವಿಶೇಷಣಗಳೆಂದು ಭಾವಿಸದಿದ್ದರೆ ಬೇರೆ ವಾಕ್ಯವೊಂದು ಆಗುತ್ತದೆ. ಅದಕ್ಕೆ ಕ್ರಿಯಾಪದವಿಲ್ಲ, ಕರ್ತೃ ಪದವಿಲ್ಲ. ಇಲ್ಲದ ಪದಗಳನ್ನು ಕಲ್ಪಿಸಿ ವಿಸಂಗತ ಅರ್ಥವನ್ನೇಕೆ ಹೇಳಬೇಕು ?

ಕೊನೆಯದಾಗಿ ಧ್ವಂಸಕ್ರಿಯೆ ಕ್ಷಪಣಕ್ರಿಯೆಗಳಲ್ಲಿ ಭೇದವಿಲ್ಲವೆ ? ಪುನರ್ಜನ್ಮ ನಾಶವಾಗಲಿ ಎಂದರೆ ಧ್ವಂಸವಾಗುತ್ತದೆಯೇ ? ಮೋಕ್ಷ ಒಮ್ಮೆಲೆ ದೊರೆಯುತ್ತದೆಯೇ ? "ಅನೇಜನ್ಮಸಂಸಿದ್ಧಃ ತತೋಯಾತಿಪರಾಂಗತಿಂ" ಎಂದು ಸ್ಮೃತಿ ಹೇಳುತ್ತದಲ್ಲ. ಅನೇಕ ಜನ್ಮಗಳು ಒಮ್ಮೆಲೇ ಧ್ವಂಸವಾಗಲಾರವು. ಅವು ಕ್ರಮೇಣ ಕ್ಷಯಿಸಬಹುದು. ಆದ್ದರಿಂದ "ಕ್ಷಪಯತು". ಜನ್ಮಾಂತರಗಳ ಪರಿವರ್ತವೇ "ಪರಿಭ್ರಮ". ಈ ಜನ್ಮಸಿಗಿ ಇನ್ನೊಂದು ಜನ್ಮ ಬರುವದು ಪುನರ್ಭವ. ಪುನರ್ಭವ ನಾಶವಾದ ಮಾತ್ರಕ್ಕೆ ಮೋಕ್ಷವೇ ಆದೀತೆಂಬ ಭರವಸೆ ಎಲ್ಲಿದೆ ?

---

# ಉದ್ದಂಡ ದೀರ್ಘದಂಡ ಷಟ್ಪದಿ ವಿಚಾರ-ಟಿಪ್ಪಣಿ

—**ಟಿ. ಕೇಶವಭಟ್ಟ**

'ಕದಂಬ' ಎಂಬ ಸಂಶೋಧನ ಲೇಖನಗಳ ಸಂಪುಟ, ಇದೀಗ ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನದ ಐವತ್ತನೆಯ ಪ್ರಕಟನೆ ಹಾಗೂ ಎಂ. ವಿ. ಸೀ. ಸಮಗ್ರ ಸಾಹಿತ್ಯಮಾಲೆಯಲ್ಲಿ ಮೊದಲನೆಯದು ; 1993ರಲ್ಲಿ ಹೊರಬಂದಿದೆ. ಇದರಲ್ಲಿ 'ಛಂದಸ್ಸು' ಎಂಬ ಭಾಗದಲ್ಲಿ 'ಉದ್ದಂಡ ಷಟ್ಪದಿಯ ಸಮಸ್ಯೆ' ಎಂಬ ಸಂಶೋಧಾತ್ಮಕ ಲೇಖನ ಪ್ರಕೃತ ಲಕ್ಷ್ಯಾರ್ಹವಾಗಿದೆ. ರಾಘವಾಂಕನ ವೀರೇಶ ಚರಿತೆಯ ಛಂದಸ್ಸಾಗಿರುವ ಉದ್ದಂಡ ಷಟ್ಪದಿಯನ್ನು ಲಾಕ್ಷಣಿಕ ವಿವೇಚನೆಗೆ ಒಳಪಡಿಸಿರುವ ಹಲವು ವಿದ್ವಾಂಸರ ಅಭಿಪ್ರಾಯಗಳನ್ನು ಅನುಲಕ್ಷಿಸಿ ಮಾನ್ಯ ಲೇಖಕರು ಇದನ್ನು ರೂಪಿಸಿದ್ದಾರೆ. ಇದೇ ಲೇಖನದಲ್ಲಿರುವ ಪ್ರಸ್ತುತ ಅಭಿಪ್ರಾಯಗಳಿವು—

"ಈ ಸಂದರ್ಭದಲ್ಲಿ ಉದ್ದಂಡ ಷಟ್ಪದಿಯನ್ನು ಹೋಲುವ ಷಟ್ಪದಿಯೊಂದು ಕೇವಲ ಆಕಸ್ಮಿಕವಾಗಿ ನನ್ನ ಗಮನಕ್ಕೆ ಬಂದಿತು. ಅದನ್ನು 'ದೀರ್ಘದಂಡ ಷಟ್ಪದಿ' ಎಂದು ಕರೆದಿದೆ. ಇದರಲ್ಲಿ ಷಟ್ಪದೀ ಸಾಮಾನ್ಯ ಲಕ್ಷಣಗಳೆಲ್ಲ ಇವೆ. 1, 2, 4, 5 ನೆಯ ಚರಣಗಳಲ್ಲಿ 24 ಮಾತ್ರೆಗಳೂ 3, 6ನೆಯ ಚರಣಗಳಲ್ಲಿ 38 ಮಾತ್ರೆಗಳೂ ಇವೆ." (ಪುಟ : 187) ಅಡಿಟಿಪ್ಪಣಿ ಹೀಗಿದೆ—

"ಈ ಪದ್ಯವನ್ನು ಬರೆದಿರುವ ಹಾಳೆ ಕೆಲವು ತಿಂಗಳುಗಳ ಹಿಂದೆ ನನ್ನ ಟಿಪ್ಪಣಿಗಳ ಪುಸ್ತಕವೊಂದರಲ್ಲಿ ದೊರಕಿತು. ಬಹುಕಾಲದ ಹಿಂದೆಯೇ ನನ್ನ ಕೈಗೆ ಬಂದಿರಬೇಕು. ಯಾರಿಂದ, ಯಾವಾಗ ಬಂದಿತು ಎಂಬುದೂ ಮರೆತುಹೋಗಿದೆ. ಇದು ಯಾವ ಕೃತಿಯ ಪದ್ಯ ಎಂಬುದೂ ನನಗೆ ತಿಳಿಯದು. ಇದರ ಆಕರ ಯಾವುದೆಂಬುದರ ಬಗೆಗೆ ಅನೇಕ ವಿದ್ವಾಂಸರಲ್ಲಿ ವಿಚಾರಮಾಡಿದರೂ ಪ್ರಯೋಜನವಾಗಲಿಲ್ಲ. ಬಲ್ಲವರು ಈ ಬಗೆಗೆ ತಿಳಿವಳಿಕೆ ನೀಡಿದರೆ ಉಪಕೃತನಾಗುವೆನು. ನನಗೆ ದೊರೆತ ಹಾಳೆಯಲ್ಲಿಯೇ ಪದ್ಯದ ಛಂದಸ್ಸಿನ ಹೆಸರನ್ನೂ ಲಕ್ಷಣ ವಿವರವನ್ನೂ ಬರೆದಿದೆ ; ಬರೆದಿರುವಂತೆ, ಚತುರ್ಮಾತ್ರಾ ಗಣವ್ಯವಸ್ಥೆ ಇಲ್ಲಿ ಕಂಡುಬರುತ್ತದೆ. ಆದರೆ, ಲಯದೃಷ್ಟಿಯಿಂದ, ಷಣ್ಮಾತ್ರಾ ಗಣವ್ಯವಸ್ಥೆಯೇ ಪರಿಗ್ರಾಹ್ಯ ಎಂದು ನನ್ನ ಎಣಿಕೆ."

ದೀರ್ಘದಂಡ ಷಟ್ಪದಿಯ ಉದಾಹೃತ ಪದ್ಯವಿದು :—

ಸೊಂಪಿಂದೊಪ್ಪುವ ಕುಂತಳ ದೇಶದೊಳು ವಿರೂಪಾಕ್ಷನ
ಲಂಪಿನ ಪಂಪಾಕ್ಷೇತ್ರದೊಳಾರಾಧ್ಯ ಬ್ರಾಹ್ಮಣ ಕುಲ
ಸಂಪನ್ನ ಮಹಾದೇವನೆನಿಪ್ಪಂ ವಿದ್ವಜ್ಜನರ ಶಿರೋಮಣಿ ತತ್ಸತಿ ರುದ್ರಾಣಿ ।
ದಂಪತಿಗಳು ಸದ್ಭಕ್ತಿಮನಸ್ಕತೆಯಿಂದಾ ಪರಶಿವ
ನಂ ಪೂಜಿಸಲಾತನ ವೈರಾಗ್ಯಂ ಜ್ಞಾನಸಗುಣಗಳೆ
ಲ್ಲಂ ಪರಿಜಾಗುತೆ ರುದ್ರಾಣಿಯು ಗರ್ಭಾಂಬುಧಿಯಿಂ ಬರಲಾದನು ಪಂಡಿತ ರಾಘವನು॥

ಮುಂದಿನ ಪುಟದಲ್ಲಿ (188) ಈ ಮಾತುಗಳಿವೆ :—

"ಇದು ರಾಘವಾಂಕನ ಜೀವನವನ್ನು ಕುರಿತ ಕಾವ್ಯದ (ಪ್ರಾರಂಭದ) ಪದ್ಯ ಎಂಬುದು ಸ್ಪಷ್ಟ. ಈ ಪದ್ಯದ ಕವಿ ರಾಘವಾಂಕನ ಉದ್ದಂಡ ಷಟ್ಪದಿಯಲ್ಲಿ ರಚಿತವಾದ ವೀರೇಶ ಚರಿತೆಯನ್ನೂ ಉದ್ದಂಡದ ಲಯಸ್ವರೂಪವನ್ನೂ ಬಲ್ಲವನಾಗಿರಬೇಕು. ಉದ್ದಂಡ ಷಟ್ಪದಿಯ ಚರಣಗಳ ಪ್ರಮಾಣವನ್ನು ಎಳೆದು ಹೆಚ್ಚಿಸಿ (ದೀರ್ಘಮಾಡಿ), ತನ್ನ ಪ್ರಯೋಗವನ್ನು 'ದೀರ್ಘದಂಡ ಷಟ್ಪದಿ' ಎಂದು ಹೆಸರಿಸಿರುವ ಹಾಗೆ ಕಾಣುತ್ತದೆ. ಈ ಷಟ್ಪದಿ ಸಾಂಪ್ರದಾಯಿಕವಾದ ಷಟ್ಪದಿಗಳ ಪಟ್ಟಿಯಲ್ಲಿ ಏಳನೆಯದಾದ ಉದ್ದಂಡ ಷಟ್ಪದಿಯ ಜೊತೆಗೆ ಎಂಟನೆಯದಾಗಿ ನಿಂತು, ಷಟ್ಪದೀ ಛಂದಸ್ಸಿನ ಚರಿತ್ರೆಯಲ್ಲಿ ಉಲ್ಲೇಖ ಪಡೆಯತಕ್ಕದ್ದಾಗಿದೆ. ಇದರ ಲಕ್ಷಣದ ಬಗ್ಗೆ ಯಾವ ಸಮಸ್ಯೆಯೂ ಬಹುಶಃ ಇರಲಾರದು; ಆದರೆ, ಉದ್ದಂಡ ಷಟ್ಪದಿಯ ಲಕ್ಷಣ ನಿಷ್ಕರ್ಷೆಯನ್ನು ಕುರಿತ ಈ ಲೇಖನಕ್ಕೆ ಪ್ರೇರಕವಾದ ಈ ಪದ್ಯ ಉದ್ದಂಡ ಷಟ್ಪದಿಯ ಸಮಸ್ಯೆಯ ಪರಿಹಾರಕ್ಕೆ ಅಗತ್ಯವಾದ ಬೆಳಕನ್ನು ಚೆಲ್ಲಬಲ್ಲದ್ದಾಗಿದ್ದು, ವಿಶೇಷ ಪ್ರಾಮುಖ್ಯವನ್ನು ಪಡೆದಿದೆ."

ಈ ಪೂರ್ವೋಕ್ತವಾದ ನೆಲೆಗಳಿಂದ ಕೆಲವು ಸ್ಪಷ್ಟೀಕರಣಗಳನ್ನಿಲ್ಲಿ ನಾನು ನಿರೂಪಿಸದಿದ್ದರೆ, ಆತ್ಮದ್ರೋಹವೂ ಆದೀತು, ಅಲ್ಲದೆ ಆಗಲಿರುವ ವಿದ್ವಚ್ಚೇತನಕ್ಕೂ ಹಿತವೆಸಗದ ತಪ್ಪಾದೀತು. ದಿವಂಗತ ಎಂ. ವಿ. ಸೀ. ಅವರ ಆತ್ಮತೃಪ್ತಿಗಾಗಿ ಮತ್ತು ಓದುಗರ ಅರಿವಿಗಾಗಿ ಸತ್ಯಾಂಶಗಳನ್ನಿಲ್ಲಿ ಬಯಲಾಗಿಸುತ್ತಿದ್ದೇನೆ—

ದಿನಾಂಕ 30-6-1968, ಅಂದು ಬೆಂಗಳೂರಿನ ನರಸಿಂಹರಾಜ ಕಾಲೋನಿಯ ರಾಮಮಂದಿರದಲ್ಲಿ ಬಸವನಗುಡಿ ಕನ್ನಡಿಗರ ಕೂಟದ ಆಸರೆಯಲ್ಲಿ ಒಂದು ಸಾಹಿತ್ಯ ಸಮಾರಂಭ. ಪ್ರೊ॥ ಎಂ. ವಿ. ಸೀ. ಅವರ ಅಧ್ಯಕ್ಷತೆ. 'ಕವಿ ರಾಘವಾಂಕ' ಎಂಬ ವಿಷಯವಾಗಿ ನನ್ನ ಉಪನ್ಯಾಸ. ನನ್ನದೇ ರಚನೆಯಾಗಿದ್ದ, ಮೇಲೆ ಕಾಣಿಸಿರುವ ದೀರ್ಘದಂಡ ಷಟ್ಪದೀ ಪದ್ಯವನ್ನು ರಾಘವಾಂಕನ ಉದ್ದಂಡ ಷಟ್ಪದಿಗೆ ಆನುಷಂಗಿಕವಾಗಿ ಸಭೆಯಲ್ಲಿ ಪ್ರಸ್ತಾಪಿಸಿ, ಕೊನೆಗೆ ಅದರ ಒಂದು ಪ್ರತಿಯನ್ನು ಎಂ. ವಿ. ಸೀ. ಅವರಿಗೆ ನಾನು ಕೊಟ್ಟಿದ್ದೆನು. ಅದರಲ್ಲಿ ನಾನು ಸಹಿ ಹಾಕಿರಲಿಲ್ಲ. ಮುಂದೆ ನಾನು ಇದೇ ಉಪನ್ಯಾಸವನ್ನು 1975ರಲ್ಲಿ ಪ್ರಕಟವಾದ 'ಮಣಿಹಾರ' ಎಂಬ ಪ್ರಬಂಧ ಸಂಕಲನದಲ್ಲಿ 'ಕೃತಕೃತ್ಯ ಕವಿ' ಎಂಬ ಶೀರ್ಷಿಕೆಯಲ್ಲಿ ಪ್ರಕಾಶನ ಪಡಿಸಿರುತ್ತೇನೆ. ಈ

ಪುಸ್ತಕ ಪ್ರತಿಯನ್ನು ನಾನು ಎಂ. ವಿ. ಸೀ. ಅವರಿಗೆ ಕೊಟ್ಟಿದ್ದರೂ ತಮ್ಮ ಲೇಖನ ಬರೆವ ಮುಂಚೆ ಅವರಿಗೆ ಪರೀಕ್ಷಿಸಲು ಆಗಲಿಲ್ಲವೆಂಬುದು ಸ್ಪಷ್ಟವಿದೆ. ಉದ್ದಂಡ ಷಟ್ಪದಿಗೆ ಸಂಬಂಧಿಸಿದಂತೆ ಅದರಲ್ಲಿ ವ್ಯಕ್ತವಾಗಿರುವ ಅಂಶಗಳು ಅವರ ಈ ಲೇಖನಕ್ಕೆ ಪೂರಕವಾಗುವುದರಿಂದ ಅಷ್ಟನ್ನು ಮಾತ್ರ ಉದ್ಧರಿಸಿ ಸಹೃದಯರ ಅವಲೋಕನಕ್ಕಾಗಿ ಇಲ್ಲಿ ಕೊಡುವುದು ಸಮುಚಿತವೆಂದು ಭಾವಿಸುತ್ತೇನೆ—

"ವೀರೇಶಚರಿತೆಯ ಛಂದೋರೂಪವನ್ನು 'ಉದ್ದಂಡಷಟ್ಪದಿ' ಎನ್ನಲಾಗಿದೆ. ಮಾತ್ರಾಗಣನೆಯಲ್ಲಿ ಇದು ವಾರ್ಧಕದಂತೆಯೇ ಇದೆ. ಆದರೆ ಗಣವಿಭಾಗದ ದೃಷ್ಟಿಯಿಂದ ಇದು ವಾರ್ಧಕಷಟ್ಪದಿಯಲ್ಲ. ವಾರ್ಧಕದ ರಚನೆ ಪಂಚಮಾತ್ರಾಗಣಗಳಿಂದ ಆಗುತ್ತದೆ. ಉದ್ದಂಡಷಟ್ಪದಿ ಪಂಚಮಾತ್ರಾ ಗಣದ ಗಣನೆಗೆ ಒಡಂಬಡುವುದಿಲ್ಲ. ಚತುರ್ಮಾತ್ರಾಗಣಗಳೇ ಇದರ ಘಟಕಗಳು. ನಾಲ್ಕು ಮಾತ್ರೆಯ ಗಣಗಳು ಏಕತಾಳದ ಗತಿಗೆ ಅಳವಡುವುದಾಗಿ ವೀರರಸ ಪ್ರಚೋದಕಗಳಾಗಿವೆ. ಸೈನಿಕರ ಪಥಸಂಚಲನಕ್ಕೆ ಈ ಗಣಗಳ ಗತಿ ಸೂಕ್ತವಾದುದು. ಈ ದೃಷ್ಟಿಯಿಂದ ಉದ್ದಂಡ ಷಟ್ಪದಿಯನ್ನು 'ಸಂಚಲನಗೀತ' (Marching Song) ಎನ್ನಬಹುದು. ಈ ಶಬ್ದದ ಅರ್ಥವೂ ಅದೇ. ಉತ್ + ದಂಡ (ಉದ್ದಂಡ) ಎಂದಾಗ, ಎತ್ತಿದ ದಂಡ ಎಂಬುದರ್ಥ. ಸೈನ್ಯಸಂಚಲನದಲ್ಲಿ ರಣವಾದ್ಯಗಳನ್ನು ಪದಗತಿಗೆ ಅನುಗುಣವಾಗಿ ನಿನದಿಸುತ್ತಾರೆ ; ಆಗ ಎತ್ತಿದ ದಂಡ (ಶಸ್ತ್ರ—ಈ ಕಾಲದಲ್ಲಿ ಕೋವಿ) ಹಿಡಿದ ಸಮವಸ್ತ್ರವುಳ್ಳ ದಳ ಕ್ರಮಬದ್ಧವಾಗಿ ಹೆಜ್ಜೆಯಿಟ್ಟು ನಡೆಯುವುದಷ್ಟೇ ? ಸೈನ್ಯವು ಶತ್ರುಗಳ ಮೇಲೆ ದಂಡೆತ್ತುವುದು 'ಉದ್ದಂಡ'ವೆನಿಸುವುದು. ಉದ್ದಂಡ ಷಟ್ಪದಿಯಲ್ಲಿ ರಚಿತವಾದ ಈ ಕಾವ್ಯವು ದಕ್ಷಯಾಗದ ಕಡೆಗೆ ವೀರೇಶನು ತನ್ನ ಗಣಕುಲದೊಡನೆ ದಂಡೆತ್ತಿಹೋದ ಕಥನದಿಂದ ಕೂಡಿದೆ....ಷಟ್ಪದಿಯಲ್ಲಿ ಪ್ರಯೋಗ ಪರಿಣತನಾದ ಕವಿ ರಾಘವಾಂಕನಿಗೆ ಹೀಗೆ ಬಗೆಬಗೆಯ ಷಟ್ಪದಿಗಳನ್ನು ರಚಿಸುವುದು ಲೀಲಾಜಾಲವಾಗಿ ಕಾಣುತ್ತದೆ. ಆದರೆ, ಷಟ್ಪದಿಯ ಸಾಮಾನ್ಯ ಲಕ್ಷಣವನ್ನು ಈ ಉದ್ದಂಡಷಟ್ಪದಿಯಲ್ಲಿ ಕಾಣಲಾಗುವುದಿಲ್ಲ. ಇದರ ಮೂರನೆಯ ಮತ್ತು ಆರನೆಯ ಪಾದ ಸರಿಯಾದ ಲೆಕ್ಕಕ್ಕೆ ಬರುವುದಿಲ್ಲ. ಲಾಕ್ಷಣಿಕವಾಗಿ ಆ ಒಂದು ಪಾದದಲ್ಲಿ ಗಣಗಳು $5 + 2\frac{1}{2} +$ ಒಂದು ಗುರು ಬರಬೇಕು. 'ಅರ್ಧಗಣ' ಎಂದರೇನು ? ಗಣ ಅರ್ಧವಾದರೆ ಅದು ಗಣವೆನಿಸುವುದೇ ಇಲ್ಲ. ಆದುದರಿಂದ ಷಟ್ಪದಿಯ ಲಕ್ಷಣವನ್ನು ಸರಿಯಾಗಿ, ಸ್ಪಷ್ಟವಾಗಿ ಇಲ್ಲಿ ಅನ್ವಯಿಸಲು ಬರುವುದಿಲ್ಲ. ಈ ಉದ್ದಂಡ ಷಟ್ಪದಿಯಂತೂ ಪ್ರಚಲಿತವಾಗಲಿಲ್ಲ ; ಜನಪ್ರಿಯವೂ ಆಗಿಲ್ಲ. ರಾಘವಾಂಕನಿಂದ ಈಚೆಯವರು ಅದನ್ನು ಕಾವ್ಯರಚನೆಗೆ ಬಳಸಿಕೊಳ್ಳಲಿಲ್ಲ. ಇದೇ ನಾಲ್ಕು ಮಾತ್ರೆಯ ಗಣಗಳನ್ನು ಮೊದಲು ಎರಡು ಪಾದಗಳಲ್ಲಿ ಆರು ಆರರಂತೆ ಬಳಸಿ, ಹಾಗೂ ಮೂರನೆಯ ಪಾದದಲ್ಲಿ ಅದರ ಒಂದೂವರೆಯಷ್ಟನ್ನು ಮತ್ತು ಒಂದು ಗುರುವನ್ನು ಬಳಸಿಕೊಂಡು ಉತ್ತಮವಾದ, ಶಾಸ್ತ್ರಬದ್ಧ

ವಾದ ಒಂದು ದೀರ್ಘದಂಡ ಷಟ್ಪದಿಯನ್ನು ರಚಿಸಬಹುದು. 'ದೀರ್ಘದಂಡ ಷಟ್ಪದಿ' ಎಂದು ಹೆಸರಿಟ್ಟು ಅಂತಹ ಒಂದು ಷಟ್ಪದಿಯನ್ನು ಸಹೃದಯರ ಅವಗಾಹನೆಗಾಗಿ ಇಲ್ಲಿ ಕೊಡುತ್ತೇನೆ. ಕವಿ ರಾಘವಾಂಕನ ಜನ್ಮಕಥೆ ಇಲ್ಲಿದೆ,"

ಎಂ. ವಿ. ಸೀ. ಅವರು ಈ ಎರಡೂ ಬಗೆಯ ಷಟ್ಪದಿಗಳಿಗೆ ಚತುರ್ಮಾತ್ರಾ ಲಯಕ್ಕಿಂತ ಹೆಚ್ಚಾಗಿ ಒಪ್ಪುವುದು ಷಣ್ಮಾತ್ರಾ ಲಯವೆಂದು ಅಭಿಪ್ರಾಯ ಪಟ್ಟಿದ್ದಾರೆ. ಇದಲ್ಲದೆ, 'ಉದ್ದಂಡ' ಎಂಬುದನ್ನು ಉತ್+ದಂಡಕ ಎಂದು ವಿಂಗಡಿಸಿ ಹೆಸರಿಗೆ ಸಾರ್ಥಕ್ಯವನ್ನು ತರಲು ಪ್ರಯತ್ನಿಸಿದ್ದಾರೆ. ಆದರೆ, ಆಗ, ಅದು ನಾನು ವಿವರಿಸಿರುವಂತೆ, ಪಥಸಂಚಲನಕ್ಕೆ ಅಳವಡುವ ಲಕ್ಷಣದಿಂದಾಗಿ ಉದಂಡ ಷಟ್ಪದಿ ಎನ್ನಲು ಬರುವುದಿಲ್ಲ. ಷಣ್ಮಾತ್ರಾಗಣದ ಪದ್ಯ ಪಥಸಂಚಲನಕ್ಕಾಗದು. ಪರಿಣತರು ಈ ವಿಚಾರವಾಗಿ ಪರ್ಯಾಲೋಚಿಸಬಹುದಾಗಿದೆ.

....—

# ಗ್ರಂಥ ವಿಮರ್ಶೆ

## ಸಾಹಿತ್ಯದ ಚತುರ್ಮುಖರು

ಕವಿ, ಗಮಕಿ, ವಾದಿ, ವಾಗ್ಮಿ ಎಂಬೀ ನಾಲ್ವರು ವಿದ್ವತ್ಸಭೆ ರಾಜಸಭೆಗಳೆರಡರಲ್ಲಿಯೂ ವಿಜೃಂಭಿಸುತ್ತಿದ್ದ ಸಾಹಿತ್ಯದ ಚತುರ್ಮುಖರೆಂದು ಪರಿಗಣಿಸಲಾಗಿದೆ. ಕನ್ನಡದಲ್ಲಿ ಈ ಬಗೆಯ ಸಮಗ್ರ ವಿವರಣಾತ್ಮಕ ಕೃತಿ ಎಂದೋ ಬರಬೇಕಾಗಿತ್ತು. ಅಂತಹದೊಂದು ಕೃತಿಯಿಲ್ಲದ ಅರಕೆ ಈಗ ತುಂಬಿಬಂದುದು ಮೆಚ್ಚತಕ್ಕ ಸಂಗತಿ. ಇದರಲ್ಲಿರುವ ನಾಲ್ಕು ಪ್ರಬಂಧಗಳಲ್ಲಿ ಮೊದಲು ಬರುವ ಕವಿ, ಗಮಕಿ—ಎಂಬೆರಡನ್ನು ಬರೆದವರು ಖ್ಯಾತ ಗಮಕಿ ಶ್ರೀ ಆರ್. ಶಂಕರನಾರಾಯಣ್. ಇವರು ಈ ಕೃತಿಯ ಪ್ರಕಾಶಕರೂ ಆಗಿರುತ್ತಾರೆ. ಇನ್ನುಳಿದ ವಾದಿ, ವಾಗ್ಮಿ ಶೀರ್ಷಿಕೆಯ ಎರಡು ಪ್ರಬಂಧಗಳ ಕರ್ತಾರರು ವಿದ್ವಾನ್ ಎನ್. ರಂಗನಾಥಶರ್ಮರು. ಇವರು ಸಂಸ್ಕೃತ-ಕನ್ನಡ ಉಭಯ ಭಾಷಾ ಸಾಹಿತ್ಯ ಪ್ರವೀಣರಾದ ಸಹೃದಯ ವಿದ್ವಾಂಸರು.

ಪ್ರಬಂಧದಲ್ಲಿ ಪ್ರತಿಪಾದಿಸಿರುವಂತೆ ಕಾವ್ಯಸೃಷ್ಟಿಕರ್ತನಾದ ಕವಿ, ಲೋಕ ಸೃಷ್ಟಿಕರ್ತನಾದ ಚತುರ್ಮುಖ ಬ್ರಹ್ಮನನ್ನು ಹೋಲುತ್ತಾನೆ ಹಾಗೂ ಸೃಷ್ಟಿಶಕ್ತಿಯಲ್ಲಿ ಮೀರುತ್ತಾನೆ. ಕವಿ ಶಬ್ದ ವ್ಯುತ್ಪತ್ತಿ, ಕವಿಯಲಕ್ಷಣ, ಕವಿಕರ್ಮದ ಹಿರಿಮೆ, ಕವಿಯ ಸಾಧನೆ, ಕವಿಸಮಯ, ಕಾವ್ಯಪ್ರಯೋಜನ ಮುಂತಾದವನ್ನು ವಿವರಿಸಲಾಗಿದೆ. ಗಮಕಿ ಎಂಬ ಪ್ರಬಂಧದಲ್ಲಿ ಗಮಕ-ಗಮಕಿ ಎಂಬ ಉಭಯ ವಿಷಯಗಳನ್ನೂ ಪೂರ್ವಿಕ ಮತ್ತು ಆಧುನಿಕ ವಿದ್ವಾಂಸರ ಅಭಿಪ್ರಾಯಗಳ ಸಮೀಕ್ಷೆಯೊಂದಿಗೆ ವಿವರಿಸಿ, ಗಮಕಕ್ಕೆ ಉತ್ತಮ ಭವಿಷ್ಯವಿರುವುದಾಗಿ ನಿರೂಪಿಸಲಾಗಿದೆ.

ವಾದಿ, ವಾಗ್ಮಿಗಳೆಂದರೆ ಯಾರು ? ಅವರ ಅರ್ಹತೆಯೇನು ? ಎಂಬದನ್ನು ಕಾವ್ಯ ಸನ್ನಿವೇಶಗಳ ಉದಾಹರಣೆಗಳಿಂದ ಮತ್ತು ಶಾಸ್ತ್ರಾಧಾರಗಳಿಂದ ವಿಶದಪಡಿಸಿರುವುದನ್ನು ಕಾಣುತ್ತೇವೆ. ಈ ವಿಶದೀಕರಣದಲ್ಲಿ ವೈಚಾರಿಕ ಸಮೃದ್ಧಿ ಮತ್ತು ಪ್ರಾಗಲ್ಭತೆಗಳನ್ನು ಕಾಣುತ್ತೇವೆ. ಎಲ್ಲ ವಿಚಾರಗಳನ್ನೂ ಕ್ರೋಢೀಕರಿಸಿರುವ ಕೊನೆಯ

---

ಪ್ರ : ಸತ್ಯಶ್ರೀ ಪ್ರಕಾಶನ. 67. ಐ.ಟಿ.ಐ. ಬಡಾವಣೆ, ವಿದ್ಯಾಪೀಠ, ಬನಶಂಕರಿ 3ನೇ ಹಂತ, ಬೆಂಗಳೂರು-560 085. ಪುಟಗಳು (1/8 ಕ್ರೌನ್) 196
ಬೆಲೆ : ರೂ. 35-00 (ಪ್ರ. ಮು. 1993)

ವಾಕ್ಯಗಳಿವು—ಕವಿ, ಗಮಕಿ, ವಾದಿ, ವಾಗ್ಮಿಗಳಲ್ಲಿ ವಾಗ್ಮಿಕ ಇದ್ದೇ ಇದೆ. ಅವರೆಲ್ಲರೂ ಅದರ ಹಿನ್ನೆಲೆಯಿಂದ ಸ್ಫೂರ್ತಿಯನ್ನು ಪಡೆದವರೇ. ಒಂದಾನೊಂದು ಶಕ್ತಿವಿಶೇಷವು ಪ್ರಮುಖವಾಗಿ ಪ್ರಕಟವಾಗುವುದರಿಂದ ಕವಿ, ಗಮಕಿ–ಮುಂತಾದ ವಿಭಿನ್ನ ನಾಮ ಧೇಯಗಳು. ಕಾವ್ಯರಚನಾಪ್ರತಿಭೆ ಎದ್ದು ವಿಜೃಂಭಿಸಿದಾಗ ಕವಿಯೆನಿಸುತ್ತಾನೆ. ಗಮಕಿಯಲ್ಲಿ ಅದು, ಹಾಲಿನಲ್ಲಿರುವ ಸಿಹಿಯಂತೆ ಸುಪ್ತವಾಗಿದ್ದು, ಕಾವ್ಯವಾಚನ ಶೈಲಿಯಲ್ಲಿ ತೋರಿಕೊಳ್ಳುತ್ತದೆ. ಖಂಡನೆ ಮಂಡನೆಗಳಲ್ಲಿ ಬುದ್ಧಿಶಕ್ತಿಯನ್ನು ವಿನಿ ಯೋಗಿಸುವ ವಾಗ್ಮಿಯೇ ವಾದಿಯೆನಿಸುತ್ತಾನೆ. ಈ ಮೂವರಲ್ಲಿರುವ ವಿಶಿಷ್ಟ ಸಾಮರ್ಥ್ಯವನ್ನು ಗೌಣವಾಗಿರಿಸಿ, ವಾಕ್‌ಶಕ್ತಿಯೇ ಪ್ರಧಾನವಾಗಿ ಪ್ರಕಾಶಿಸಿದಾಗ ವಾಗ್ಮಿಯೆನಿಸುತ್ತಾನೆ.”

ಸಾಹಿತಿಯೂ ವಿಮರ್ಶನಪಟುವೂ ಆಗಿರುವ ಶ್ರೀ ಆರ್. ಎಸ್. ರಾಮರಾವ್ ಅವರ ಮುನ್ನುಡಿ, ಡಾ|| ಪು. ತಿ. ನ. ಅವರ ಶುಭಾಶಂಸನ, ಗಮಕಿ ಶ್ರೀ ಎಂ. ರಾಘ ವೇಂದ್ರರಾವ್ ಅವರ ಹಾರೈಕೆಗಳು ಈ ಕೃತಿಯ ಸೊಬಗಿನ ಮತ್ತು ಉಪಯುಕ್ತತೆಯ ದಿಕ್ಸೂಚಿಗಳಾಗಿ ಶೋಭಾವಹವಾಗಿವೆ. ಶ್ರೀ ಆರ್. ಶಂಕರನಾರಾಯಣರ ಪ್ರಸ್ತಾವನೆ ಓದುಗರ ಸಹೃದಯತೆಯನ್ನು ಹೆಚ್ಚಿಸುವಂತಿದೆ. ಗ್ರಂಥದ ಕೊನೆಗೆ ಎರಡು ಸಹ ಬಂಧಗಳಲ್ಲಿ ಕವಿ, ಗಮಕಿ ಪ್ರಬಂಧಗಳಲ್ಲಿ ಬಂದ ಪದ್ಯಗಳ ಅಕಾರಾದಿಯೂ ಗ್ರಂಥಋಣ ಸೂಚಿಯೂ ಇವೆ. ಸೊಗಸಾಗಿ ಸಮರ್ಪಕವಾಗಿ ರೂಪಗೊಂಡ ಪ್ರಬಂಧಗಳು, ತಪ್ಪಿಲ್ಲದ ಮುದ್ರಣ, ಅರ್ಥವತ್ತಾದ ಮುಖಪುಟ, ಲೇಖಕರನ್ನು ಕಣ್ಣಿಗೆ ಕಾಣಿಸಿ ಪರಿಚಯಿಸುವ ಹೊರಪುಟ—ಹೀಗೆ ಎಲ್ಲವೂ ಹೇಗೆ ಬೇಕೋ ಹಾಗೆ ರೂಪಗೊಂಡಿರುವ ಪುಸ್ತಕವಿದು. ಗಮಕಿಗಳಿಗೆ ಸಾಹಿತಿಗಳಿಗೆ ಹಾಗೂ ಈ ಕ್ಷೇತ್ರದ ವಿದ್ಯಾರ್ಥಿಗಳಿಗೆ ಎಲ್ಲ ಕನ್ನಡಿಗರಿಗೆ ಅನುಭವದ ಔತಣವನ್ನು ನೀಡುವುದರಿಂದ ಎಲ್ಲರಿಗೂ ಗ್ರಾಹ್ಯವಾಗಿದೆ ಎನ್ನುವುದು ನಿಜವಾದ ಸಂಗತಿಯಾಗಿದೆ.

**ಟಿ. ಕೇಶವಭಟ್ಟ**

——

**ಸ್ಕಂದವೈಭವ**

ದ. ಕ. ಜಿಲ್ಲೆಯ ಬಂಟವಾಳ ತಾಲೂಕಿನ ಪ್ರಸಿದ್ಧಗ್ರಾಮ ಕರೋಪಾಡಿ. ಈ ಗ್ರಾಮದ ವಗೆನಾಡು ದೇವದೈವಂಗಳ ಕಾರಣಿಕ ಪುಣ್ಯಸ್ಥಳ. ಇಲ್ಲಿರುವ ಶ್ರೀ ಸುಬ್ರಾಯ ದೇವಸ್ಥಾನದ ನವೀಕರಣ ಬಿಂಬ ಪ್ರತಿಷ್ಠಾಷ್ಟಬಂಧ ಮಹೋತ್ಸವದ ಸ್ಮರಣ ಸಂಪುಟವಾಗಿ ಈ **ಸ್ಕಂದವೈಭವ** ಪ್ರಕಟವಾಗಿದೆ. ಶಿವಪಾರ್ವತಿಯರ ಒಬ್ಬ ಮಗ ಭಕ್ತರಿಗೆ ವಿಘ್ನಹರಣನಾದರೆ, ಇನ್ನೊಬ್ಬನು ಎಳವೆಯಲ್ಲಿಯೇ ತಾರಕಾಸುರನನ್ನು ವಧಿಸಿ, ಲೋಕಕ್ಕೆ ಕ್ಷೇಮವನ್ನುಂಟುಮಾಡಿದ ಮತ್ತು ಭಕ್ತರಿಗೆ ಇಷ್ಟಾರ್ಥ ನೀಡತಕ್ಕ ಸ್ಕಂದ. ಈತನು ಶಿಖಿವಾಹನ, ಕಾರ್ತಿಕೇಯ, ಷಣ್ಮುಖ, ಸೇನಾನಿ, ಕುಮಾರಸ್ವಾಮಿ, ಗುಣ, ಸುಬ್ರಹ್ಮಣ್ಯ–ಮುಂತಾದ ಬಹುನಾಮಗಳುಳ್ಳವನು ; ಸಹಸ್ರ ನಾಮಗಳುಳ್ಳವನು, ಸರ್ಪರೂಪನೂ ಹೌದು. ಸುಬ್ರಹ್ಮಣ್ಯ ಎಂಬುದರ ಪರ್ಯಾಯವಾಗಿ ಸುಬ್ರಾಯ ಶಬ್ದವಿದೆ.

ಪ್ರಸ್ತುತ ಸ್ಕಂದ ವೈಭವವು ದೇವಾಲಯದ ಪುನರ್ನಿರ್ಮಾಣದ ವಿವರದೊಂದಿಗೆ ಸ್ಥಳೀಯ ಇತಿಹಾಸ, ಸಂಸ್ಕೃತಿ, ದೈವಾರಾಧನೆ, ದೇವತಾರಾಧನೆಗಳ ವಿವರಗಳಿಂದಲೂ ಕೂಡಿದೆ. ಪರಿಣತ ವಿದ್ವಾಂಸರ ಲೇಖನಗಳಿಂದ ಕೂಡಿ ಈ ಗ್ರಂಥಕ್ಕೆ ಆಕರ ಮೌಲ್ಯವುಂಟಾಗಿದೆ.

ಈ ಗ್ರಂಥ ಮೂರು ಭಾಗಗಳಿಂದ ಕೂಡಿದೆ. ಮೊದಲನೆಯದು **ನೆಲೆ–ಹಿನ್ನೆಲೆ**. ಈ ಭಾಗದಲ್ಲಿ ಮೊದಲನೆಯದಾಗಿ ಕರೋಪಾಡಿಯ ಒಂದು ಸಾಂಸ್ಕೃತಿಕ ಚಿತ್ರವನ್ನು ಕೊಡಲಾಗಿದೆ. ಕಾಲ, ಘಟನೆಗಳ ಅಂಕೆ–ಸಂಖ್ಯೆಗಳೊಂದಿಗೆ, ಬೂತಸ್ಥಾನ, ಗುಡಿ, ಕೊಟ್ಟಗೆ, ಚಾವಡಿ, ಉಯ್ಯಾಲೆ, ಜಾತ್ರೆಗಳ ವಿಚಾರಗಳನ್ನೆಲ್ಲ ಲಕ್ಷ್ಯವಿಟ್ಟಿರುವ ವಿವರಗಳಿವೆ, ದೈವ–ದೇವಾಲಯಗಳ ಆಡಳಿತ, ಆಡಳಿತದ ಮನೆತನಗಳ ಮುಕ್ತೇಸರರ ವಿವರಗಳು, ಸೇವೆಗಳ ಹೊಣೆಹೊತ್ತ ಜನ ಜಾತಿ ವರ್ಗ ವಿವರಗಳನ್ನು ನೋಡಿದಾಗ ಬಾಹ್ಯ ಭೇದವಷ್ಟೇ ಇದ್ದರೂ ಜಾತಿಗಳೊಳಗೆ ಅದೆಂತಹ ಐಕ್ಯಮತ್ಯವಿರುತ್ತದೆ ಎಂಬ ಅರಿವಾಗುತ್ತದೆ. ಇದೇ ಭಾಗದಲ್ಲಿ ವೀರಪಾಂಡ್ಯನ ಶಿಲಾಶಾಸನ, ಮಲರಾಯ ದೈವದ ಚರಿತ್ರೆ, ಕರೋಪಾಡಿಯ ಮೋಡಿ–ಇಪ್ಪೆಲ್ಲ ಬೆರಗುಪಡಿಸುವ ವಿವರಗಳಾಗಿ ಕೃತಿಗೆ ಶೋಭೆಯನ್ನು ತಂದಿವೆ.

ಎರಡನೆಯ ಭಾಗ–ಆರಾಧನೆಯನ್ನು ಕುರಿತಾಗಿದ್ದು ಹದಿನೆಂಟು ಲೇಖನಗಳನ್ನು ಒಳಗೊಂಡಿದೆ. ವೈದಿಕ ವಾಙ್ಮಯದಲ್ಲಿ. ಸ್ತೋತ್ರಗಳಲ್ಲಿ ಚಿತ್ರಿತವಾದಂತೆ, ತುಳುಪಾರ್ದನಗಳಲ್ಲಿ ಬಂದಿರುವಂತೆ ಸುಬ್ರಹ್ಮಣ್ಯದೇವರ ವಿವರಗಳು ಇಲ್ಲಿವೆ. ನಾಗಾರಾಧನೆ, ದ. ಕ. ಜಿಲ್ಲೆಯ ಸುಬ್ರಹ್ಮಣ್ಯ ದೇವಾಲಯಗಳ ವಿವರ,ಕೇರಳದಲ್ಲಿ ನಾಗಪೂಜೆ, ಸ್ಕಂದ ಪುರಾಣ, ಪ್ರತಿಷ್ಠಾ ಬ್ರಹ್ಮಕಲಶ–ಮುಂತಾದ ವಿವರಗಳು ಇಲ್ಲಿ ಸೂಕ್ತವಾಗಿ ಬಂದಿವೆ. ಮೂರನೆಯ ಭಾಗದಲ್ಲಿ ಪರಿಸರ ವಿಚಾರಗಳಿವೆ. ಸಮಾಜ, ಸಂಘಟನೆಯಲ್ಲಿ ದೇವಾಲಯ

ಗಳ ಪಾತ್ರ, ಜೀರ್ಣೋದ್ಧಾರದ ಸಾಮಾಜಿಕ ಕಾರ್ಯ, ಶೈಕ್ಷಣಿಕ ವಿಚಾರ, ಪರಿಸರದ ಮಾದರಿಯಂತಹ ವಿಚಾರಗಳು ಈ ಭಾಗದಲ್ಲಿವೆ. ಗ್ರಂಥ ಪ್ರಾರಂಭದಲ್ಲಿ ಪಾಡೆಕಲ್ಲು ನರಸಿಂಹಭಟ್ಟ ವಿರಚಿತ ಸ್ತುತಿ ಪಂಚಕವು ಸಂಸ್ಕೃತದಲ್ಲಿದೆ. ಅನಂತರ ನೀರ್ಪಾಜೆ ಭೀಮಭಟ್ಟರು ಬರೆದಿರುವ ಸುಬ್ರಹ್ಮಣ್ಯಸ್ತವವಿದೆ. ಇದೂ ಸಂಸ್ಕೃತದಲ್ಲಿದ್ದು ಭಕ್ತಿ ಪೂರ್ಣವಾಗಿದೆ. ಸೂಕ್ತವಾದ ಅನುಬಂಧಗಳಿಂದಲೂ ಕೂಡಿರುವ ಈ ಸ್ಮರಣ ಸಂಪುಟವು ಸಾರ್ಥಕವೂ, ಅಪೇಕ್ಷಣೀಯವೂ ಆಗಿ ಸಂಗ್ರಹಯೋಗ್ಯವಾಗಿದೆ.

**ಟಿ. ಕೇಶವಭಟ್ಟ**

---

ಸಂ : ಪಾಡೇಕಲ್ಲು ವಿಷ್ಣುಭಟ್ಟ–ಪ್ರ : ಶ್ರೀ ಸುಬ್ರಾಯ ದೇವಸ್ಥಾನ ಮತ್ತು ಪುಲರಾಯ ದೈವಂಗಳ ಸೇವಾ ಸಮಿತಿ (ರಿ.) ಕರೋಪಾಡಿ, ದ. ಕ. 574280, ಪುಟಗಳು: (1/8 ಡೆಮ್ಮಿ)152 ಬೆಲೆ: ರೂ. 30–00(ಪ್ರ.ಮು. ಜನವರಿ 1993)

# ವಸ್ತು ಸಂಗ್ರಹ

## ೧. ಸಾಹಿತ್ಯ ಸಮ್ಮೇಳನ

ಅಖಿಳ ಭಾರತ ೬೩ನೆಯ ಕನ್ನಡ ಸಾಹಿತ್ಯ ಸಮ್ಮೇಳನವು ಈ ಬಾರಿ, 1994, ಫೆಬ್ರವರಿ, 11, 12, 13 ಈ ಮೂರುದಿನ ಮಂಡ್ಯದಲ್ಲಿ ನೆರವೇರಿತು. ಕಬ್ಬಿನ ಹಾಲಿನ ಸಕ್ಕರೆ ಸೀಮೆಯ ನಗರವಾದ ಮಂಡ್ಯದಲ್ಲಿನ ಸರ್. ಎಂ. ವಿಶ್ವೇಶ್ವರಯ್ಯ ಕ್ರೀಡಾಂಗಣದಲ್ಲಿ ಭವ್ಯವಾಗಿ ನಿರ್ಮಿಸಲಾದ ಮಹಾಕವಿ ಕುವೆಂಪು ಮಂಟಪ, ಕೆ. ವಿ. ಶಂಕರಗೌಡ ವೇದಿಕೆ, ಶ್ರೀಕಂಠೇಶಗೌಡ ಮಹಾದ್ವಾರದಿಂದೊಪ್ಪುವ ಸ್ಥಳದಲ್ಲಿ ಹತ್ತು ಸಾವಿರಕ್ಕೂ ಮಿಕ್ಕಿದ ಪ್ರತಿನಿಧಿಗಳ ಸೇರುವಿಕೆಯಲ್ಲಿ ಜರಗಿತು. ಸಮ್ಮೇಳನಾಧ್ಯಕ್ಷರು ಡಾ|| ಚದುರಂಗರು. ಮುಖ್ಯಮಂತ್ರಿ ಶ್ರೀ ಎಂ. ವೀರಪ್ಪಮೊಯ್ಲಿಯವರಿಂದ ಸಮ್ಮೇಳನದ ಉದ್ಘಾಟನೆ. ಸಮ್ಮೇಳನಾಧ್ಯಕ್ಷರ ಭಾಷಣ, 'ಸಿರಿಯೊಡಲು' ಎಂಬ ನೆನಪಿನ ಸಂಚಿಕೆಯ ಬಿಡುಗಡೆ ಅದರೊಂದಿಗೆ 'ಮಂಡ್ಯದರ್ಶನ' ಕೃತಿಯ ಬಿಡುಗಡೆ, ಪುಸ್ತಕ ಪ್ರದರ್ಶನ, ಕಲಾ ಪ್ರದರ್ಶನ. ಸಾಂಸ್ಕೃತಿಕ ಕಾರ್ಯಕ್ರಮಗಳು. ನಾಡು–ನುಡಿ–ಸಾಹಿತ್ಯ–ಶಿಕ್ಷಣ, ಸಾಹಿತ್ಯ ವಿಮರ್ಶೆ, ಕನ್ನಡ ಮಾಧ್ಯಮ, ಕವಿಗೋಷ್ಠಿ, ಹೊಸ ಶೋಧಗಳು, ಅಲಕ್ಷಿತ ಕನ್ನಡ ಸಾಹಿತ್ಯ–ಇವುಗಳನ್ನು ಕುರಿತಾದ ಗೋಷ್ಠಿಗಳು, ಸನ್ಮಾನ-ಸಮಾರೋಪಗಳು ಈ ಮೂರು ದಿನಗಳ ಕಾರ್ಯಕ್ರಮಗಳಾಗಿದ್ದವು.

ಕನ್ನಡ ಅಭಿವೃದ್ಧಿಗೆ ಯೋಜನೆ ತಯಾರಿ, ಕನ್ನಡವನ್ನು ಆಡಳಿತ ಭಾಷೆಯಾಗಿ ಮಾಡಲು ಮೊದಲು ಸಚಿವಾಲಯದ ಮಟ್ಟದಲ್ಲಿ ಅನುಷ್ಠಾನ, ತಾಯಿನುಡಿಯಲ್ಲಿ ಶಿಕ್ಷಣಕ್ಕೆ ಭರವಸೆ–ಇಂತಹ ನೀತಿಯನ್ನು ಮುಖ್ಯಮಂತ್ರಿಗಳು ಘೋಷಿಸಿದರು. ಪ್ರತಿದಿನ ಸಂಜೆ ಸಾಂಸ್ಕೃತಿಕ ಕಾರ್ಯಕ್ರಮಗಳಿದ್ದವು.

## ೨. ಸಂಶೋಧನ ದಿನ (ವಿಚಾರ ಸಂಕಿರಣ)

1994, ಜನವರಿ 23ರಂದು, ಕನ್ನಡ ಸಾಹಿತ್ಯ ಪರಿಷತ್ತಿನ ಸಭಾಂಗಣದಲ್ಲಿ ಶಂಬಾ ವಿಚಾರ ವೇದಿಕೆ ಮತ್ತು ಕರ್ನಾಟಕ ಸಾಹಿತ್ಯ ಅಕಾಡೆಮಿ ಏರ್ಪಡಿಸಿದ್ದ "ಸೇಡಿಯಾಪು ಕೃಷ್ಣಭಟ್ಟರ ಸಾಹಿತ್ಯಸಾಧನೆ ಮತ್ತು ಸಂಶೋಧನ ವಿಧಿ ವಿಧಾನಗಳು" ಎಂಬ ಗೋಷ್ಠಿ ಏರ್ಪಟ್ಟಿದ್ದಿತು. ಡಾ|| ಎಂ. ಚಿದಾನಂದಮೂರ್ತಿಯವರ ಅಧ್ಯಕ್ಷತೆಯಲ್ಲಿ ಉದ್ಘಾಟನೆ, ಡಾ|| ಟಿ. ವಿ. ವೆಂಕಟಾಚಲಶಾಸ್ತ್ರಿಯವರ ಅಧ್ಯಕ್ಷತೆಯಲ್ಲಿ ಸೇಡಿಯಾಪು ಸಾಹಿತ್ಯ ಸಮೀಕ್ಷೆ, ಡಾ|| ಎಂ. ಎಂ. ಕಲಬುರ್ಗಿಯವರ ಅಧ್ಯಕ್ಷತೆಯಲ್ಲಿ ಸಂಶೋಧನ ವಿಧಿ ವಿಧಾನಗಳು (ಮುಕ್ತಗೋಷ್ಠಿ) ಕಾರ್ಯಕ್ರಮಗಳು ಜರಗಿದವು.

### ೩. ಜಾನಪದಲೋಕ ಪ್ರವೇಶೋತ್ಸವ

ನಮ್ಮ ನಾಡಿನ ಸಂಸ್ಕೃತಿಯ ತಾಯಿಬೇರಿನಂತಿರುವ ಜಾನಪದ ಸಂಸ್ಕೃತಿಯ ಪ್ರತಿಬಿಂಬವಾಗಿ ಜಾನಪದಲೋಕ ತಲೆಯೆತ್ತಿದೆ. ನಿವೃತ್ತ ಐ. ಎ. ಎಸ್. ಅಧಿಕಾರಿ ಹಾಗೂ ಜಾನಪದ ರಂಗದ ಭೀಷ್ಮರಾದ ಡಾ|| ಎಚ್. ಎಲ್. ನಾಗೇಗೌಡರ ಕನಸನ್ನು ಅವರೇ ಪ್ರತ್ಯಕ್ಷಗೊಳಿಸಲು ಕಾರಣರಾದ ಲೋಕವಿದು. ಬೆಂಗಳೂರು-ಮೈಸೂರು ಹೆದ್ದಾರಿಯಲ್ಲಿ ರಾಮನಗರದ ಬಳಿ ಹದಿನೈದು ಎಕರೆ ಸುಂದರ ಗ್ರಾಮ ಪರಿಸರದಲ್ಲಿದೆ. ಇಲ್ಲಿ ಹಲವಾರು ಮ್ಯೂಸಿಯಂಗಳು, ಸಮುದಾಯ ಭವನ, ರಂಗಮಂದಿರ, ರೆಸ್ಟಾರೆಂಟ್, ಹಾಲು, ಹಣ್ಣು, ತರಕಾರಿ ಮಳಿಗೆಗಳು ಅಸ್ತಿತ್ವಕ್ಕೆ ಬಂದಿವೆ. ಶನಿವಾರ, ಭಾನುವಾರ ಗಳಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳು ಜರಗುತ್ತವೆ. ಈ 'ಜಾನಪದಲೋಕ'ದ ಪ್ರವೇಶೋತ್ಸವವು 1994, ಮಾರ್ಚಿ, 12, 13, 14 ಈ ಮೂರು ದಿನಗಳ ಕಾರ್ಯ ಕ್ರಮವಾಗಿ ನೆರವೇರಿದವು. ಈ ಸಂದರ್ಭದಲ್ಲಿ ಜಾನಪದ ಪರಿಷತ್ತಿಗೂ, ಜಾನಪದ ಲೋಕ ನಿರ್ಮಾಣಕ್ಕೂ ನೆರವಾದ ೨೪ ಮಂದಿಯನ್ನು ಸತ್ಕರಿಸಲಾಯಿತು.

### ೪. ಕನ್ನಡ ರತ್ನಕೋಶದ ಬಿಡುಗಡೆ

ಕನ್ನಡ ಸಾಹಿತ್ಯ ಪರಿಷತ್ತು 1977ರಲ್ಲಿ ಪ್ರಥಮ ಮುದ್ರಣವಾಗಿ ಹೊರತಂದಿರುವ ಎಲ್ಲ ಕನ್ನಡಿಗರಿಗೆ ಮುಖ್ಯವಾಗಿ ವಿದ್ಯಾರ್ಥಿಗಳಿಗೆ ಉಪಯುಕ್ತವಾಗುವ 'ಕನ್ನಡ ರತ್ನಕೋಶ' ಈಗ ಕರ್ನಾಟಕ ಸರಕಾರದ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಪ್ರಕಟನೆಯಾಗಿ ಹೊರಬಂದಿದೆ. 12-4-1994ರಂದು ವಿಧಾನಸೌಧದ ಬ್ಯಾಂಕ್ವೆಟ್ ಹಾಲಿನಲ್ಲಿ ಇದರ ಬಿಡುಗಡೆಯ ಸಮಾರಂಭ ನೆರವೇರಿತು. ಮಾನ್ಯ ಮುಖ್ಯ ಮಂತ್ರಿಗಳು ಇದನ್ನು ಬಿಡುಗಡೆ ಮಾಡಿದರು. ಪ್ರಾಧಿಕಾರದ ಅಧ್ಯಕ್ಷರಾದ ಶ್ರೀ ಜಿ. ನಾರಾಯಣ ಅವರು ಪ್ರಾಸ್ತಾವಿಕವಾಗಿ ಈ ಕೋಶದ ವೈಶಿಷ್ಟ್ಯವನ್ನೂ ಉಪಯುಕ್ತತೆಯನ್ನೂ ವಿವರಿಸಿದರು.

---

# ಪ್ರತಿಷ್ಠಾನ ವಾರ್ತೆ

---

**೧. ಪ್ರತಿಷ್ಠಾನದ ಐವತ್ತನೆಯ ಪುಸ್ತಕದ ಬಿಡುಗಡೆ ಮತ್ತು ಎಂ. ವಿ. ಸೀ. ಸಮಗ್ರ ಸಾಹಿತ್ಯ ಪ್ರಕಟನೆಗಾಗಿ ರಾಘವ ಪ್ರಕಾಶನ ದತ್ತಿನಿಧಿ ಸ್ಥಾಪನೆ :**

ಎಂ. ವಿ. ಸೀ. ಸಂಸ್ಮರಣೆಯ ಅಂಗವಾಗಿ ನಡೆದ ವಿಶೇಷ ಕಾರ್ಯಕ್ರಮದಲ್ಲಿ ಶ್ರೀ ಜಿ. ನಾರಾಯಣ ಅವರು ಉದ್ಘಾಟನೆ ಮಾಡಿದ 'ರಾಘವ ಪ್ರಕಾಶನ ದತ್ತಿನಿಧಿ'ಯ ಮೂಲಕ 'ಎಂ. ವಿ. ಸೀ. ಸಮಗ್ರ ಸಾಹಿತ್ಯಮಾಲೆ'ಯಲ್ಲಿ ಎರಡು ಸಂಪುಟಗಳನ್ನು ಬಿಡುಗಡೆಮಾಡಲಾಯಿತು. ದಿನಾಂಕ 26-3-94ರಂದು ನಗರ ಕ. ಸಾ. ಪ. ದ ನೆರವಿನಿಂದ ನಡೆದ ಈ ಸಮಾರಂಭದಲ್ಲಿ ಮೊದಲ ಸಂಪುಟ 'ಕದಂಬ'ವನ್ನು ಡಾ|| ಹಾ. ಮಾ. ನಾಯಕ್ ಅವರೂ ಎರಡನೆಯ ಸಂಪುಟ 'ಕವಿರಾಜಮಾರ್ಗ'ವನ್ನು ಪ್ರೊ||ಎಲ್. ಎಸ್. ಶೇಷಗಿರಿರಾವ್ ಅವರೂ ಬಿಡುಗಡೆ ಮಾಡಿದರು. ಸಮಾರಂಭ ನಿಟ್ಟೂರು ಶ್ರೀನಿವಾಸರಾವ್ ಅವರ ಅಧ್ಯಕ್ಷತೆಯಲ್ಲಿ ನಡೆಯಿತು.

(i) **'ಕದಂಬ':** ಎಂ. ವಿ. ಸೀತಾರಾಮಯ್ಯನವರ ಸಮಗ್ರ ಸಂಶೋಧನಾ ಲೇಖನಗಳ ಸಂಪುಟ ಎಂ. ವಿ. ಸೀ. ಸಂಸ್ಮರಣ ಸಮಿತಿಯು ಈ ಯೋಜನೆಯನ್ನು ಪ್ರತಿಷ್ಠಾನಕ್ಕೆ ವಹಿಸಿ ಸುಮಾರು 35 ಸಾವಿರ ರೂ.ಗಳ ಆರ್ಥಿಕ ನೆರವನ್ನು ನೀಡಿದುದರ ಫಲವಾಗಿ ಪ್ರತಿಷ್ಠಾನ ಈ ಗ್ರಂಥವನ್ನು ಪ್ರಕಟಿಸಲು ಸಾಧ್ಯವಾಗಿದೆ.

(ii) **'ಕವಿರಾಜಮಾರ್ಗ' :** ಎಂ. ವಿ. ಸೀ. ಅವರ ಪ್ರಸಿದ್ಧ ಸಂಪಾದಿತ ಕೃತಿ. ನ್ಯೂಯಾರ್ಕ್ ಕನ್ನಡ ಕೂಟದ ಇಪ್ಪತ್ತು ವರ್ಷಗಳ ಸಾರ್ಥಕ ಸೇವೆಯ ನೆನಪಿಗಾಗಿ ಕನ್ನಡ ಕೂಟದ ಸುಮಾರು 35 ಸಾವಿರ ರೂ.ಗಳ ಅರ್ಥಿಕ ನೆರವಿನೊಂದಿಗೆ ಪ್ರತಿಷ್ಠಾನ ಈ ಗ್ರಂಥವನ್ನು ಪ್ರಕಟಿಸಿದೆ. ಈ ಗ್ರಂಥವನ್ನು ಎಂ. ವಿ. ಸೀ. ಯವರ ಮೊದಲ ಮುದ್ರಣದ ಎಲ್ಲಾ ಟಿಪ್ಪಣಿಗಳನ್ನೂ ಮತ್ತು ಎರಡನೇ ಮುದ್ರಣದಲ್ಲಿ ಮಾಡಿದ್ದ ತಿದ್ದುಪಡಿಗಳನ್ನೂ ಅಳವಡಿಸಿ ಪರಿಷ್ಕರಿಸಿ ಮುದ್ರಿಸಿದೆ.

ಈ ಮಾಲೆಯಲ್ಲಿ ಈಗ ಪ್ರಕಟಿಸಿರುವ ಎರಡು ಗ್ರಂಥಗಳ ಜೊತೆಗೆ 3ನೇ ಸಂಪುಟ ದಲ್ಲಿ ಕವಿರಾಜಮಾರ್ಗ ಕುರಿತ ಲೇಖನಗಳನ್ನೂ 4ನೇ ಸಂಪುಟದಲ್ಲಿ ಇತರ ಎಲ್ಲ ಬಿಡಿ ಲೇಖನಗಳನ್ನೂ ಉಳಿದ ಸಂಪುಟಗಳಲ್ಲಿ ಅವರ ಸಮಗ್ರ ಕೃತಿಗಳನ್ನೂ ಪ್ರಕಟಿಸುವ ಉದ್ದೇಶವಿದೆ. ಈ ಗ್ರಂಥಗಳ ಮಾರಾಟದಿಂದ, ಬಹುಮಾನ, ಪ್ರಶಸ್ತಿ. ಗೌರವ ಸಂಭಾವನೆಗಳಿಂದ ಬರುವ ಹಣವೆಲ್ಲ ಈ ದತ್ತಿಗೇ ಸೇರಲಿದ್ದು ಮುಂದಿನ ಸಂಪುಟಗಳ ಪ್ರಕಟನೆಗೆ ಮೂಲಧನವಾಗಲಿದೆ. ಸೀತಾರಾಮಯ್ಯನವರ ಎಲ್ಲ ಕೃತಿಗಳೂ ಎಲ್ಲ ಕಾಲ ದಲ್ಲಿ ಓದುಗರಿಗೆ ಸಿಗುವಂತಾಗಬೇಕೆಂಬುದೇ ಈ ದತ್ತಿಯ ಮುಖ್ಯ ಉದ್ದೇಶವಾಗಿದೆ.

(iii) **ಸೀತಾರಾಮಯ್ಯನವರ ಎಲ್ಲ ಗ್ರಂಥಗಳ ಪ್ರಕಟನೆಯ ಹಕ್ಕು ಪ್ರತಿಷ್ಠಾನಕ್ಕೆ :** ಸೀತಾರಾಮಯ್ಯನವರ ಮಕ್ಕಳು ಉದಾರ ಕೊಡುಗೆಯಿಂದ ಎಂ. ವಿ. ಸೀ. ಅವರ ಸ್ವಂತ ಪ್ರಕಾಶನ ಸಂಸ್ಥೆಯಾಗಿದ್ದ 'ರಾಘವ ಪ್ರಕಾಶನ'ದ ಹೆಸರಿನಲ್ಲಿ ಒಂದು ದತ್ತಿಯನ್ನು ಸ್ಥಾಪಿಸಿ ಅವರ ಎಲ್ಲ ಕೃತಿಗಳನ್ನೂ 'ಸಮಗ್ರ ಸಂಪುಟಗಳಲ್ಲಿ' ಪ್ರಕಟಿಸುವ ಉದ್ದೇಶಕ್ಕಾಗಿ ಸೀತಾರಾಮಯ್ಯನವರ ಎಲ್ಲ ಗ್ರಂಥಗಳ ಪ್ರಕಟನೆಯ ಹಕ್ಕನ್ನು ಪ್ರತಿಷ್ಠಾನಕ್ಕೆ ನೀಡಿದ್ದಾರೆ. ಇದಲ್ಲದೆ ಸುಮಾರು 7 ಸಾವಿರ ರೂ.ಗಳ ಚೆಕ್ ಅನ್ನೂ ಆರಂಭಿಕ ಠೇವಣಿಗಾಗಿ ನೀಡಿದ್ದಾರೆ. ಈ ಮಹದುಪಕ್ಕಾರಕ್ಕಾಗಿ ಪ್ರತಿಷ್ಠಾನ ಅವರಿಗೆ ಆಭಾರಿಯಾಗಿದೆ.

ಇದೇ ಸಂದರ್ಭದಲ್ಲಿ ಎಂ. ವಿ. ಸೀ ಸಂಸ್ಮರಣ ಸಮಿತಿ 'ಎಂ ವಿ.ಸೀ. ಸಂಸ್ಮರಣೆ' ಉಪನ್ಯಾಸ ಮಾಲೆಯಲ್ಲಿ ಸಹಕರಿಸಿದ ಉಪನ್ಯಾಸಕರಿಗೆ ಎಂ.ವಿ.ಸೀ. ವಿರಚಿತ ಕಲಾಕೃತಿಯುಳ್ಳ ಕನ್ನಡ ಅಂಕಿಯ ಗಡಿಯಾರವಿರುವ ಸುಂದರ ನೆನಪಿನ ಕಾಣಿಕೆಯನ್ನೂ ಸಂಸ್ಥೆಗಳಿಗೆ ಸೀತಾರಾಮಯ್ಯನವರ ಭಾವಚಿತ್ರಗಳನ್ನೂ ನೀಡಿತು. ಸೀತಾರಾಮಯ್ಯನವರ ಮಕ್ಕಳು ಮತ್ತು ನ್ಯೂಯಾರ್ಕ್ ಕನ್ನಡ ಕೂಟದ ಪ್ರತಿನಿಧಿಗಳಿಗೆ ಬಿಡುಗಡೆಯಾದ ಗ್ರಂಥಗಳ ಮೊದಲ ಪ್ರತಿಗಳನ್ನೂ ನೀಡಲಾಯಿತು.

**೨. ಬೆಳ್ಳೂರಿನಲ್ಲಿ ಬಿ. ಎಂ. ಶ್ರೀ ಭವನ**

ಬಿ. ಎಂ. ಶ್ರೀ. ಪ್ರತಿಷ್ಠಾನ ಯೋಜಿಸಿದ್ದ ಬಿ. ಎಂ. ಶ್ರೀ. ಜನ್ಮಶತಮಾನೋತ್ಸವದ ಇಡೀ ವರ್ಷದ ಯೋಜನೆಯ ಆರಂಭ ಸಮಾರಂಭದ ಉದ್ಘಾಟನೆಯಾದದ್ದು ಆಚಾರ್ಯ ಶ್ರೀಯವರ ಊರಾದ ಬೆಳ್ಳೂರಿನಲ್ಲಿ. 1994 ಜನವರಿ 3ರಂದು ನಡೆದ ಈ ಸಮಾರಂಭದಲ್ಲಿ ಶ್ರೀಯವರ ವಾಸದ ಮನೆಯಿದ್ದ ಸ್ಥಳವನ್ನು ಅದರ ಮಾಲೀಕರಾಗಿದ್ದ ಶ್ರೀ ಎಸ್. ಚಂದ್ರಶೇಖರಯ್ಯ ಅವರಿಂದ ಉದಾರವಾಗಿ ಪ್ರತಿಷ್ಠಾನ ಪಡೆದು ಅಲ್ಲಿ ಶ್ರೀ ಜನ್ಮಶತಮಾನೋತ್ಸವ ಸ್ಮರಣೆಯ ಸ್ಮಾರಕ ಭವನವನ್ನು ನಿರ್ಮಿಸುವ ಉದ್ದೇಶಕ್ಕಾಗಿ ಶಂಕುಸ್ಥಾಪನೆಯನ್ನು ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳಿಂದ ನೆರವೇರಿಸಲಾಗಿತ್ತು. ಕರ್ನಾಟಕ ಸರ್ಕಾರ, ಮಂಡ್ಯ ಜಿಲ್ಲಾ ಪರಿಷತ್ತು, ಭೂಸೇನಾ ನಿಗಮ ಮತ್ತು ಮುಖ್ಯವಾಗಿ ಶತಮಾನೋತ್ಸವ ಸಮಿತಿಯ ಸ್ವಾಗತಾಧ್ಯಕ್ಷರಾಗಿದ್ದ ಶ್ರೀ ಕೆ. ಸಿಂಗಾರಿಗೌಡರ ಪರಿಶ್ರಮದಿಂದ ಸಂಸ್ಥಾಪಕರಾದ ಡಾ|| ಎಂ. ವಿ. ಸೀತಾರಾಮಯ್ಯನವರ ಕನಸು ದಿನಾಂಕ 13-6-94ರಂದು ಬೆಳ್ಳೂರಿನಲ್ಲಿ ನನಸಾಯಿತು. ಶಂಕುಸ್ಥಾಪನೆಮಾಡಿದ್ದ ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥಸ್ವಾಮೀಜಿಯವರೇ ಶ್ರೀ ಭವನವನ್ನು ಉದ್ಘಾಟನೆ ಮಾಡುವ ಮೂಲಕ ಪ್ರತಿಷ್ಠಾನ ಬೆಳ್ಳೂರಿನಲ್ಲಿ ಪದಾರ್ಪಣೆಮಾಡಿತು.

ಈ ಉದ್ಘಾಟನಾ ಸಮಾರಂಭವನ್ನು ನಡೆಸುವ ಮತ್ತು ಶ್ರೀ ಭವನದ ಮುಂದಿನ ಚಟುವಟಿಕೆಗಳ ನಿರ್ವಹಣೆಯ ಉದ್ದೇಶಕ್ಕಾಗಿ ಶ್ರೀ ಶ್ರೀ ಗಳವರ ಮಹಾಪೋಷಕತ್ವದಲ್ಲಿ ಶ್ರೀ ಭವನದ ನಿರ್ಮಾಣಕ್ಕೆ ಶ್ರಮಿಸಿದ್ದ ಕೇಂದ್ರ ಮತ್ತು ಸ್ವಾಗತ ಸಮಿತಿಗಳ ಅಧ್ಯಕ್ಷ

ರಾಗಿದ್ದ ಶ್ರೀ ಕೆ. ಸಿಂಗಾರಿಗೌಡ ಹಾಗೂ ಶ್ರೀ ಜಿ. ನಾರಾಯಣ ಅವರ ಪ್ರೋಷಕತ್ವದಲ್ಲಿ ಸ್ಥಳೀಯ ಉತ್ಸಾಹಶೀಲ ಉದ್ಯಮಿಗಳಾದ ಶ್ರೀ ಎಸ್. ಕೃಷ್ಣಮೂರ್ತಿ ಅವರು ಕಾರ್ಯಾಧ್ಯಕ್ಷರಾಗಿರುವ ಒಂದು ಸ್ಥಾನಿಕ ಸಮಿತಿಯನ್ನು ರಚಿಸಿ ಅದರ ಸಹಕಾರದಿಂದ ಸಮಾರಂಭವನ್ನು ಯಶಸ್ವಿಯಾಗಿ ನಡೆಸಲಾಯಿತು.

ಇದೇ ಸಂದರ್ಭದಲ್ಲಿ ಬೆಂಗಳೂರು–ಮಂಗಳೂರು ಹೆದ್ದಾರಿಯಲ್ಲಿರುವ ಬೆಳ್ಳೂರು ಕ್ರಾಸ್ ಅನ್ನು 'ಬಿ. ಎಂ. ಶ್ರೀ. ವೃತ್ತ' ಎಂದೂ ಅಲ್ಲಿಂದ ಬೆಳ್ಳೂರಿಗೆ ಬರುವ ರಸ್ತೆಯನ್ನು 'ಬಿ. ಎಂ. ಶ್ರೀ. ರಸ್ತೆ ಎಂದೂ ನಾಮಕರಣ ಮಾಡಲಾಯಿತು.

ಶ್ರೀ ಭವನದಲ್ಲಿ ಶ್ರೀ ಜೀವನ-ಸಾಧನೆ ಕುರಿತ ವಸ್ತುಸಂಗ್ರಹಾಲಯ, ಶ್ರೀ ಶತಮಾನ ಗ್ರಂಥಾಲಯ ಮತ್ತು ಶ್ರೀಯವರ ಪ್ರತಿಮೆಗಳ ಉದ್ಘಾಟನೆ ಮಾಡಲಾಯಿತು. ಶ್ರೀ ಭವನವನ್ನು ದೊಡ್ಡಪ್ರಮಾಣದಲ್ಲಿ ಉದ್ಘಾಟನೆ ಮಾಡಬೇಕೆಂಬ ಉದ್ದೇಶದಿಂದ ಇಡೀ ದಿವಸದ ಕಾರ್ಯಕ್ರಮವನ್ನು ರೂಪಿಸಿ, ವಿಚಾರಗೋಷ್ಠಿ. ಕವಿಗೋಷ್ಠಿ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸಲಾಗಿತ್ತು. ಸ್ಥಳೀಯ ವ್ಯವಸ್ಥೆಗಳನ್ನೆಲ್ಲ ಜಿಲ್ಲಾ ಪರಿಷತ್ತು ಭವನದ ನಿರ್ಮಾಣದ ಹೊಣೆ ಹೊತ್ತಿದ್ದ ಭೂಸೇನಾ ನಿಗಮ ಮತ್ತು ಮಂಡಲ ಪಂಚಾಯಿತಿಗಳು ವಹಿಸಿದ್ದವು. ಬೆಂಗಳೂರಿನಿಂದ ಎರಡು ಬಸ್ಸುಗಳಲ್ಲಿ ಆಸಕ್ತರನ್ನು ಕರೆದೊಯ್ದು. ಆಹ್ವಾನಪತ್ರ, ಅತಿಥಿಗಳ ವೆಚ್ಚ, ಓಡಾಡಿದ, ಸಭೆ ನಡೆಸಿದ ವೆಚ್ಚಗಳು, ಸಮಾರಂಭದ ವೆಚ್ಚ ಇತ್ಯಾದಿಗಳಿಗೆ ಪ್ರತಿಷ್ಠಾನವು ಸುಮಾರು 35 ಸಾವಿರ ರೂ. ಗಳನ್ನು ವೆಚ್ಚಮಾಡಿದೆ. ಆತಿಥ್ಯದ ಭಾರವನ್ನು ಶ್ರೀಮಠ ವಹಿಸಿತ್ತು. ಸರ್ಕಾರವು ಎರಡು ಮಹಡಿಗಳಲ್ಲಿ 20-80 ಅಡಿಗಳ ಅಳತೆಯಲ್ಲಿ ಸುಮಾರು 5 ಲಕ್ಷ ರೂ.ಗಳ ವೆಚ್ಚದಲ್ಲಿ ಶ್ರೀಭವನವನ್ನು ನಿರ್ಮಿಸಿಕೊಟ್ಟಿದೆ.

(i) **ಭವನದ ಉದ್ಘಾಟನೆ :** ಬೆಳ್ಳೂರು ಭವನದ ಉದ್ಘಾಟನಾ ಸಮಾರಂಭವು ಸಂಭ್ರಮ ಸಂತೋಷಗಳ ವಾತಾವರಣದಲ್ಲಿ 13,6-94ರಂದು ಜಗದ್ಗುರು ಶ್ರೀ ಶ್ರೀ ಬಾಲಗಂಗಾಧರನಾಥಸ್ವಾಮಿಗಳು. ಶ್ರೀ ಆದಿಚುಂಚನಗಿರಿ ಮಹಾಸಂಸ್ಥಾನ ಇವರ ಸಾನ್ನಿಧ್ಯದಲ್ಲಿ ಜರುಗಿತು. ಶ್ರೀಯವರ ಪ್ರತಿಮೆಯನ್ನು ಪ್ರೊ|| ಎ. ಎನ್. ಮೂರ್ತಿರಾಯರು ಅನಾವರಣ ಮಾಡಿದರು. ಶ್ರೀ ಶ್ರೀ ಶ್ರೀ ಯವರು ವಸ್ತುಸಂಗ್ರಹಾಲಯ ಮತ್ತು ಗ್ರಂಥಾಲಯಗಳನ್ನೂ ಉದ್ಘಾಟಿಸಿದರು. ಶ್ರೀ ಜಿ. ನಾರಾಯಣ ಅವರು ಬಿ. ಎಂ. ಶ್ರೀ ರಸ್ತೆಯನ್ನು ಉದ್ಘಾಟಿಸಿದರು. ಬಿ. ಎಂ. ಶ್ರೀ. ವೃತ್ತದ ಉದ್ಘಾಟನೆಯು ಶ್ರೀ ಕೆ. ಸಿಂಗಾರಿಗೌಡ ಮಾಜಿ ಅಧ್ಯಕ್ಷರು, ಮಂಡ್ಯ ಜಿಲ್ಲಾ ಪರಿಷತ್ತು ಇವರಿಂದ ನೆರವೇರಿತು. ಮಂಡ್ಯ ಜಿಲ್ಲಾಧಿಕಾರಿಗಳಾದ ಶ್ರೀ ಡಿ. ವೀರಭದ್ರಾಚಾರಿ ಅವರು ಶ್ರೀ ಭವನದ ಬೀಗದಕೈಯನ್ನು ಅಧ್ಯಕ್ಷರಾದ ಶ್ರೀ ಎಸ್. ಬಸವಾರಾಧ್ಯ ಅವರಿಗೆ ನೀಡುವುದರ ಮೂಲಕ ಕಟ್ಟಡವನ್ನು ಪ್ರತಿಷ್ಠಾನಕ್ಕೆ ಒಪ್ಪಿಸಿದರು. ಮಂಡಲ ಪ್ರಧಾನರಾದ ಶ್ರೀ ಅಬ್ದುಲ್ ಅಲೀಂ ಅವರು ಎಲ್ಲರನ್ನೂ ಸ್ವಾಗತಿಸಿದರು.

ಪ್ರತಿಷ್ಠಾನದ ಅಧ್ಯಕ್ಷ ಶ್ರೀ ಎನ್. ಬಸವಾರಾಧ್ಯರು ಪ್ರಸ್ತಾವನಾ ಭಾಷಣ ಮಾಡಿದರು. ಶ್ರೀ ಎಚ್. ಕೆ. ಸುರೇಶ್‌ರವರಿಂದ ಕಾರ್ಯಕ್ರಮಗಳ ನಿರೂಪಣೆ ನಡೆಯಿತು. ಶ್ರೀ ಸುನೀಲ್‌ಕುಮಾರ್ ಅವರು ಎಲ್ಲರಿಗೂ ಕೃತಜ್ಞತೆಗಳನ್ನು ಅರ್ಪಿಸಿ ಆಭಾರಮನ್ನಿಸಿದರು.

ಬೆಳಗಿನ ಸಮಾರಂಭ ಅತ್ಯಂತ ವಿಜೃಂಭಣೆಯಿಂದ ನಡೆಯಿತು. ಬೆಳ್ಳೂರಿನ ಮುಖ್ಯಬೀದಿಗಳಲ್ಲಿ ಶ್ರೀಭವನದವರೆಗೆ ಅತಿಥಿಗಳನ್ನು ಭವ್ಯ ಮೆರವಣಿಗೆಯಲ್ಲಿ ಕರೆತರಲಾಯಿತು. ಬೆಳ್ಳೂರು ಮತ್ತು ಶ್ರೀಮಠದ ಶಾಲೆಗಳ ಮಕ್ಕಳ ಬ್ಯಾಂಡ್‌ಸೆಟ್ ಹಾಗೂ ವಾದ್ಯವೃಂದದೊಂದಿಗೆ ಮೆರವಣಿಗೆ ರಂಜಿಸಿತು

(ii) **ವಿಚಾರಗೋಷ್ಠಿ :** ಮಧ್ಯಾಹ್ನ ಆರಂಭವಾದ 'ಶ್ರೀ ಜೀವನ ಸಾಧನೆ' ಕುರಿತ ವಿಚಾರಗೋಷ್ಠಿಗೆ ಮುನ್ನ ಶ್ರೀಮಠದಿಂದ ಎಲ್ಲರಿಗೂ ರುಚಿಕರವಾದ ಊಟದ ವ್ಯವಸ್ಥೆಯೂ ಇತ್ತು. ಪ್ರೊ|| ಎಲ್. ಎಸ್. ಶೇಷಗಿರಿರಾವ್ ಅವರ ಅಧ್ಯಕ್ಷತೆಯಲ್ಲಿ ನಡೆದ ಗೋಷ್ಠಿಯಲ್ಲಿ ಪ್ರೊ|| ಆ. ರಾ. ಮಿತ್ರ, ಪ್ರೊ|| ಎಂ. ಎಚ್. ಕೃಷ್ಣಯ್ಯ, ಡಾ|| ಪಿ. ವಿ. ನಾರಾಯಣ ಅವರು ಉತ್ತಮವಾದ ಉಪನ್ಯಾಸಗಳನ್ನು ನೀಡಿದರು. ನಾಗಮಂಗಲ ತಾಲೂಕು ಕ.ಸಾ.ಪ. ಅಧ್ಯಕ್ಷರಾದ ನಾ. ಸು. ನಾಗೇಶ್ ಅವರು ಸ್ವಾಗತ ಮಾಡಿದ ಈ ಗೋಷ್ಠಿಯನ್ನು ಶ್ರೀ ಡಿ. ವಿ. ಪರಮಶಿವಮೂರ್ತಿ ಅವರು ನಿರ್ವಹಿಸಿದರು.

(iii) **ಕವಿಗೋಷ್ಠಿ :** ಸಂಜೆ ನಡೆದ ಕವಿಗೋಷ್ಠಿಯ ಅಧ್ಯಕ್ಷತೆಯನ್ನು ಪ್ರಸಿದ್ಧ ಕವಿಗಳಾದ ಪ್ರೊ|| ಜಿ, ಎಸ್. ಶಿವರುದ್ರಪ್ಪ ಅವರು ವಹಿಸಿ ಯಶಸ್ವಿಯಾಗಿ ನಡೆಸಿಕೊಟ್ಟರು. ಕವಿಗಳಾದ ಪ್ರೊ|| ಸಿ. ಪಿ. ಕೆ., ಡಾ|| ರಾಮಚಂದ್ರಶರ್ಮ, ಪ್ರೊ|| ಜಿ. ಎಸ್. ಸಿದ್ಧಲಿಂಗಯ್ಯ, ಡಾ|| ಎಚ್. ಎಸ್. ವೆಂಕಟೇಶಮೂರ್ತಿ. ಕೆ. ಎಂ. ಮುನಿಕೃಷ್ಣಪ್ಪ, ನಾ. ಗೀತಾಚಾರ್ಯ, ಕೆ. ಎಸ್. ಮಧುಸೂದನ, ಕೆ. ವಿ. ಚಂದ್ರಣ್ಣಗೌಡ, ಲತಾರಾಜಶೇಖರ್, ಪದ್ಮಾಶೇಖರ್,ವಿಜಯಲಕ್ಷ್ಮಿ ಅವರುಗಳು ಕವನ ವಾಚನ ಮಾಡಿ ಸಭಿಕರನ್ನು ರಂಜಿಸಿದರು, ಶ್ರೀ ಕೆ. ಬಸವರಾಜಪ್ಪನವರು ಗೋಷ್ಠಿಯನ್ನು ನಿರ್ವಹಿಸಿ ತಮ್ಮ ಸ್ವರಚಿತ ಕವನವನ್ನು ಸಹಾ ವಾಚಿಸಿದರು.

ರಾತ್ರಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನೆರವಿನಿಂದ ಮೈಸೂರಿನ ತಂಡದವರಿಂದ ಭರತನಾಟ್ಯ ನೃತ್ಯ ಕಾರ್ಯಕ್ರಮವೂ ನಡೆದು ಇಡೀ ಕಾರ್ಯಕ್ರಮ ಬೆಳ್ಳೂರಿನ ಜನತೆಗೆ ಉತ್ಸಾಹವನ್ನು ತಂದಿತು.

**೩. ರಾಜ್ಯ ಸರ್ಕಾರದಿಂದ ವಾರ್ಷಿಕ ಅನುದಾನ ಮತ್ತು ನಿವೇಶನ**

ಗೌರವಾಧ್ಯಕ್ಷರಾದ ಶ್ರೀ ನಿಟ್ಟೂರು ಶ್ರೀನಿವಾಸರಾವ್ ಅವರು ನಡೆಸಿಕೊಟ್ಟ ಪತ್ರಿಕಾಗೋಷ್ಠಿಯ ಸುದ್ದಿಪ್ರಕಟನೆಯ ಪ್ರಭಾವದಿಂದ ಮುಖ್ಯಮಂತ್ರಿಗಳಾದ ಮಾನ್ಯ ಶ್ರೀ ಎಂ. ವೀರಪ್ಪಮೊಯಿಲಿ ಅವರು ವಿಶೇಷವಾಗಿ ಆಸಕ್ತಿವಹಿಸಿ ನಮ್ಮ ಮನವಿಗಳನ್ನು ಪುರಸ್ಕರಿಸಿದುದರ ಫಲವಾಗಿ 1994ರ ಮಾರ್ಚ್ 31ರಂದು ಸರ್ಕಾರವು ಪ್ರತಿಷ್ಠಾನಕ್ಕೆ ವಾರ್ಷಿಕ ಅನುದಾನವಾಗಿ 50,000-00 ರೂಗಳನ್ನೂ, 'ಸಾಹಿತ್ಯೋಪಾಸಕರು' ಯೋಜನಾವೆಚ್ಚಕ್ಕಾಗಿ 30,000-00 ರೂ.ಗಳನ್ನೂ ಮಂಜೂರುಮಾಡಿದೆ. ಹಾಗೆಯೇ

ನಿವೇಶನವನ್ನು 15 ವರ್ಷಗಳ ಅವಧಿಗೆ ಮಾಹೆಯಾನ 100-00 ರೂ.ಗಳಂತೆ ನೀಡಿ ಆದೇಶ ಹೊರಡಿಸಿದೆ. ಅದು ಇದೀಗ ಮಹಾನಗರಪಾಲಿಕೆಯಲ್ಲಿದ್ದು ಸದ್ಯದಲ್ಲಿಯೇ ಪ್ರತಿಷ್ಠಾನವು ಹಕ್ಕುಪತ್ರವನ್ನು ಪಡೆಯಲಿದ್ದು, ಹಲವು ವರ್ಷಗಳ ಸತತ ಶ್ರಮದಿಂದ ಇದೀಗ ಸಾಧ್ಯವಾಗಿರುವ ಈ ನಿವೇಶನದಲ್ಲಿ ಈ ವರ್ಷವೇ ಶಂಕುಸ್ಥಾಪನೆಯನ್ನು ನೆರವೇರಿಸುವ ಆಶಯವನ್ನು ಹೊಂದಿದ್ದೇವೆ.

**೪. 'ಸಾಹಿತ್ಯೋಪಾಸಕರು' ಕಾರ್ಯಕ್ರಮಗಳು :**

24-2-94ರಂದು "ಪಾಶ್ಚಾತ್ಯ ವಿದ್ವಾಂಸರ ಕೊಡುಗೆ"-ಎಂಬ ವಿಷಯವನ್ನು ಕುರಿತು ಶ್ರೀ ಕಿ. ರಂ. ನಾಗರಾಜ್ ಅವರು ಹಾಗೂ ಶ್ರೀ ಗಂಗಾಧರ ಮಡಿವಾಳೇಶ್ವರ ತೂರಮರಿ" ಅವರನ್ನು ಕುರಿತು ಶ್ರೀ ಬಿ.ಎಸ್. ರಾಮಪ್ರಸಾದ್ ಅವರೂ ಈ ಮಾಲೆಯ 4 ಮತ್ತು 5ನೇ ಕಾರ್ಯಕ್ರಮಗಳನ್ನು ನಡೆಸಿಕೊಟ್ಟರು.

6ನೇ ಕಾರ್ಯಕ್ರಮವು 16-3-94ರಂದು ನಡೆಯಿತು. ಶ್ರೀ ಶ್ರೀನಿವಾಸ ಹಾವನೂರ ಅವರು "ವಾಲ್ಟರ್ ಎಲಿಯೆಟ್ ಮತ್ತು ಸಮಕಾಲೀನ ಪಾಶ್ಚಾತ್ಯ ವಿದ್ವಾಂಸರ ಕನ್ನಡ ಸೇವೆ"-ಎಂಬ ವಿಷಯವನ್ನು ಕುರಿತು ಭಾಷಣ ಮಾಡಿದರು.

29-4-94ರಂದು 7ನೆಯ ಕಾರ್ಯಕ್ರಮವು ನಡೆದು ಪ್ರಸಿದ್ಧ ವಿದ್ವಾಂಸರಾದ ಪ್ರೊ|| ಜಿ. ಎಸ್. ಗಾಯಿ ಅವರು "ಶಾಸನಕ್ಷೇತ್ರಕ್ಕೆ ಪಾಶ್ಚಾತ್ಯ ವಿದ್ವಾಂಸರ ಕೊಡುಗೆ" ಎಂಬ ವಿಷಯದ ಮೇಲೆ ಸಂಶೋಧನಾ ಪೂರ್ಣವಾದ ಭಾಷಣ ಮಾಡಿದರು.

8ನೆಯ ಕಾರ್ಯಕ್ರಮವು 31-5-94ರಂದು ನಡೆದು ಶ್ರೀ ಕೆ. ಎಸ್. ಮಧುಸೂದನ್‌ರವರು "ನಿಘಂಟು ಕ್ಷೇತ್ರಕ್ಕೆ ಪಾಶ್ಚಾತ್ಯ ವಿದ್ವಾಂಸರ ಕೊಡುಗೆ" ಎಂಬ ವಿಷಯವನ್ನು ಕುರಿತ ತಮ್ಮ ಲೇಖನ ಮಂಡಿಸಿ ವಿವರಣೆಯಿತ್ತರು.

9 ಹಾಗೂ 10ನೆಯ ಕಾರ್ಯಕ್ರಮಗಳನ್ನು 30-6-94ರಂದು ಶ್ರೀ ಸಿದ್ಧಲಿಂಗಯ್ಯನವರ ಅಧ್ಯಕ್ಷತೆಯಲ್ಲಿ ನಡೆಸಲಾಯಿತು. ವಿದ್ವಾಂಸರಾದ ಶ್ರೀ ಷಣ್ಮುಖಯ್ಯ ಅಕ್ಕೂರುಮಠ ಅವರು "ಡೆಪ್ಯುಟಿ ಚೆನ್ನಬಸಪ್ಪ-ಜೀವನ-ಸಾಧನೆ" ಎಂಬ ವಿಷಯದ ಮೇಲೆ ಹಾಗೂ ಶ್ರೀ ಪಂಡಿತ ಚನ್ನಪ್ಪ ಎರೆಸೀಮೆ ಅವರು "ವ್ಯಾಕರಣದ ಬಿ. ಮಲ್ಲಪ್ಪ" ಎಂಬ ವಿಷಯವನ್ನೂ ಕುರಿತು ಭಾಷಣ ಮಾಡಿದರು. ಈ ಎಲ್ಲ ಉಪನ್ಯಾಸಗಳನ್ನೂ ಪ್ರತಿಷ್ಠಾನ ಪುಸ್ತಕರೂಪದಲ್ಲಿ ಪ್ರಕಟಿಸುವ ಆಶಯವನ್ನು ಹೊಂದಿದೆ.

**೫. ಸಹೃದಯಗೋಷ್ಠಿ :**

28-2-94ರಂದು ಶ್ರೀ ಎಸ್. ಸೋಮನಾಥರಾವ್ ಅವರು 'ಶಾಸನೋಕ್ತ ಷೋಡಶ ಮಹಾದಾನಗಳು' ಎಂಬ ವಿಷಯವನ್ನು ಕುರಿತು ಹಾಗೂ 27-4-94ರಂದು 'ಇತ್ತೀಚಿನ ಸಂಶೋಧನೆಗಳು' ಎಂಬ ವಿಷಯದ ಮೇಲೆ ಶ್ರೀ ಎಸ್. ರಾಜೇಂದ್ರಪ್ಪನವರೂ ಸಹೃದಯ ಗೋಷ್ಠಿ ಕಾರ್ಯಕ್ರಮಗಳನ್ನು ನಡೆಸಿಕೊಟ್ಟರು.

——

# ಅಭಿನಂದನೆ

## ೧. ವರ್ಧಮಾನ ಪ್ರಶಸ್ತಿ

ದ. ಕ. ಜಿಲ್ಲೆಯ ಮೂಡಬಿದರೆಯ ವರ್ಧಮಾನ ಪೀಠದ 1993ನೆಯ ವರ್ಷದ ಪ್ರಶಸ್ತಿಯನ್ನು ಖ್ಯಾತ ಸಂಶೋಧಕರಾದ ಡಾ|| ಎಂ. ಎಂ. ಕಲಬುರ್ಗಿಯವರ 'ಮಾರ್ಗ-೨' ಕೃತಿಗೆ ನೀಡಲಾಗಿದೆ. ಈ ಪ್ರಶಸ್ತಿ ಆರು ಸಾವಿರ ರೂಪಾಯಿ ನಗದು ಮತ್ತು ತಾಮ್ರಪತ್ರವನ್ನೊಳಗೊಂಡಿದೆ. ಇದೇ ಪೀಠದ ಉದಯೋನ್ಮುಖ ಲೇಖಕ ಪ್ರಶಸ್ತಿಯನ್ನು ಡಾ|| ಮೀನಗುಂಡಿ ಸುಬ್ರಹ್ಮಣ್ಯಂ ಅವರ 'ಮನಸ್ಸು ಇಲ್ಲದ ಮಾರ್ಗ' ಎಂಬ ಮನೋವೈಜ್ಞಾನಿಕ ಕೃತಿಗೆ ನೀಡಲಾಗಿದೆ. ಇದು ಮೂರು ಸಾವಿರ ರೂಪಾಯಿ ಮತ್ತು ತಾಮ್ರಪತ್ರವನ್ನು ಒಳಗೊಂಡಿದೆ. ದಿನಾಂಕ 13-3-1994ರಂದು ಕಾಂತಾವರದಲ್ಲಿ ನಡೆದ ತಾಲೂಕು ಸಾಹಿತ್ಯ ಸಮ್ಮೇಳನದಲ್ಲಿ ಇದನ್ನು ನೀಡಲಾಗಿದೆ.

## ೨. ಡಾ|| ಮಾಸ್ತಿ ಪ್ರಶಸ್ತಿ

ಪ್ರಕೃತ, ಕೇಂದ್ರ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರೂ ಕಥೆ ಕಾದಂಬರಿಕಾರರೂ ಖ್ಯಾತ ಲೇಖಕರೂ ಕೇರಳದ ಗಾಂಧೀ ವಿಶ್ವವಿದ್ಯಾಲಯದ ಮಾಜಿ ಕುಲಪತಿಗಳೂ ಆಗಿರುವ ಡಾ|| ಯು. ಆರ್. ಅನಂತಮೂರ್ತಿಯವರಿಗೆ 1994ನೆಯ ವರ್ಷದ ಪ್ರತಿಷ್ಠಿತ ಡಾ|| ಮಾಸ್ತಿ ಪ್ರಶಸ್ತಿ ಬಂದಿರುತ್ತದೆ. ಈ ಪ್ರಶಸ್ತಿ ಸಣ್ಣಕತೆಯ ಕ್ಷೇತ್ರಕ್ಕೆ ಸಲ್ಲಿಸಿದ ಸೇವೆಯ ಪುರಸ್ಕಾರ. ಈ ಪ್ರಶಸ್ತಿ ಪ್ರದಾನ ಸಮಾರಂಭ ದಿನಾಂಕ 5-6-1994ರಂದು ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರದಲ್ಲಿ ಡಾ|| ಜಿ. ಎಸ್. ಶಿವರುದ್ರಪ್ಪನವರ ಅಧ್ಯಕ್ಷತೆಯಲ್ಲಿ ಜರುಗಿತು. ಮಾಜಿ ಮುಖ್ಯಮಂತ್ರಿ ಶ್ರೀ ಕೆ. ರಾಮಕೃಷ್ಣ ಹೆಗಡೆಯವರು ಪ್ರಶಸ್ತಿ ವಿತರಣೆ ಮಾಡಿದರು.

## ೩. ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ

ಪ್ರತಿಭಾವಂತ ಲೇಖಕರೂ, ಪತ್ರಿಕಾ ಸಂಪಾದಕರೂ ಆಗಿರುವ ಶ್ರೀ ಪಿ. ಲಂಕೇಶ್ ಅವರ 'ಕಲ್ಲು ಕರಗುವ ಸಮಯ' ಎಂಬ ಕೃತಿಗೆ ಮತ್ತು ಶ್ರೇಷ್ಠ ವಿಮರ್ಶಕರೂ ಲೇಖಕರೂ ಆಗಿರುವ ಶ್ರೀ ಕೀರ್ತಿನಾಥ ಕುರ್ತಕೋಟಿ ಅವರ "ಮರಾಠಿ ಸಂಸ್ಕೃತಿ" ಎಂಬ ಭಾಷಾಂತರ ಕೃತಿಗೆ (ಮೂಲ : ಶಂ. ಬಾ. ಜೋಶಿ) 1993ನೆಯ ವರ್ಷದ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗಳು ಲಭಿಸಿರುತ್ತವೆ.

## ೪. ಎರಡು ವರ್ಷಗಳ ಪಂಪ ಪ್ರಶಸ್ತಿ

ಆದಿಕವಿ ಪಂಪನ ಸ್ಮರಣೆಯಲ್ಲಿ ರಾಜ್ಯ ಸರಕಾರ ನೀಡುತ್ತಿರುವ ಪ್ರತಿಷ್ಠಿತ ಪಂಪ ಪ್ರಶಸ್ತಿ ಇಬ್ಬರು ಖ್ಯಾತ ಸಾಹಿತಿಗಳಿಗೆ ಬಂದಿರುತ್ತದೆ. 1991ನೆಯ ವರ್ಷದ ಪ್ರಶಸ್ತಿ ಪ್ರಖ್ಯಾತ ಕವಿ ಡಾ|| ಪು. ತಿ. ನರಸಿಂಹಾಚಾರ್-ಇವರ 'ಶ್ರೀ ಹರಿಚರಿತೆ' ಕಾವ್ಯಕ್ಕೆ ಬಂದಿದೆ. 1992ನೆಯ ವರ್ಷದ ಪ್ರಶಸ್ತಿಯನ್ನು ಪ್ರಸಿದ್ಧ ಸಾಹಿತಿ ಮತ್ತು ವಿಚಾರವಾದಿ ಪ್ರೊ|| ಎ. ಎನ್. ಮೂರ್ತಿರಾವ್ ಅವರ "ದೇವರು" ಎಂಬ ಕೃತಿಗೆ ನೀಡಲಾಗಿದೆ. ಇವುಗಳೊಂದಿಗೆ 'ಕನಕ ಪುರಂದರ ಪ್ರಶಸ್ತಿ' ಯನ್ನು ಖ್ಯಾತ ಹಿಂದೂಸ್ತಾನಿ ಗಾಯಕಿ ಡಾ|| ಗಂಗೂಬಾಯಿ ಹಾನಗಲ್ ಅವರಿಗೂ ಪತ್ರಿಕಾ ರಂಗದ ಸೇವೆಗಾಗಿ ಇರತಕ್ಕ ಟಿ. ಎಸ್. ರಾಮಚಂದ್ರರಾವ್ ಅವರ ಹೆಸರಿನಲ್ಲಿರುವ ಪ್ರಶಸ್ತಿಯನ್ನು ಖ್ಯಾತ ಪತ್ರಕರ್ತ ಶ್ರೀ ಪಾಟೀಲ ಪುಟ್ಟಪ್ಪನವರಿಗೂ ವಿತರಿಸಲಾಗಿದೆ. ಈ ನಾಲ್ಕೂ ಪ್ರಶಸ್ತಿಗಳು ಪ್ರತಿಯೊಂದೂ ಒಂದು ಲಕ್ಷ ರೂಪಾಯಿಗಳ ನಗದು ಬಹುಮಾನವನ್ನು ಒಳಗೊಂಡಿದೆ.

## ೫. ರಾಷ್ಟ್ರೀಯ ಪ್ರಶಸ್ತಿ

ಕನ್ನಡ ಕವಯಿತ್ರಿ ಎಚ್. ಎಲ್. ಪುಷ್ಪ ಅವರ 'ರಾತ್ರಿರಾಣಿ' ಎಂಬ ಕವನಕ್ಕೆ ಒರಿಸ್ಸಾದ 'ಉಭಯ ಭಾರತಿ ರಾಷ್ಟ್ರೀಯ ಪ್ರಶಸ್ತಿ' ದೊರಕಿರುತ್ತದೆ. ಕೇಂದ್ರ ಸರಕಾರದ ಮಾನವ ಸಂಪನ್ಮೂಲ ಇಲಾಖೆಯ ಪ್ರಾಯೋಜಿತ ಯೋಜನೆಯ ಅಂಗವಾಗಿ 'ವರ್ಣಮಾಲಾ' ಸಾಹಿತ್ಯ ಪತ್ರಿಕೆಯು ಹದಿನೈದು ಮಂದಿ ಭಾರತೀಯ ಭಾಷೆಗಳ ಯುವ ಕವಿಗಳನ್ನು ಗುರುತಿಸಿ ನೀಡತಕ್ಕ ಈ ಪ್ರಶಸ್ತಿ ಐದು ಸಾವಿರ ರೂಪಾಯಿಗಳ ನಗದು ಬಹುಮಾನವನ್ನು ಒಳಗೊಂಡಿದೆ.

## ೬. ಅನುಪಮಾ ಪ್ರಶಸ್ತಿ

ಕನ್ನಡ ಲೇಖಕಿಯರಿಗೆ ಪ್ರಶಸ್ತಿ ಕೊಡುವುದಕ್ಕಾಗಿ ಸ್ಥಾಪಿತವಾದ ಅನುಪಮಾ ಪ್ರಶಸ್ತಿಯನ್ನು 1994ನೆಯ ವರ್ಷಕ್ಕಾಗಿ ಲೇಖಕಿ ವೈದೇಹಿ ಅವರನ್ನು ಆಯ್ಕೆ ಮಾಡಿರುತ್ತಾರೆ. ಕತೆ, ಕಾದಂಬರಿ, ಕಾವ್ಯ, ಪ್ರಬಂಧ, ಅನುವಾದ, ಶಿಶುಸಾಹಿತ್ಯ ಮತ್ತು ಅಂಕಣ ಸಾಹಿತ್ಯ ಪ್ರಕಾರಗಳಲ್ಲಿ ಕನ್ನಡ ಸಾಹಿತ್ಯ ಪರಂಪರೆಗೆ ಶ್ರೀಮತಿ ವೈದೇಹಿ ಅವರು ಸಲ್ಲಿಸಿರುವ ಕಾಣಿಕೆಗೆ ಉಪಲಕ್ಷ್ಯವಾಗಿ ಈ ಪ್ರಶಸ್ತಿ ಸಂದಿರುತ್ತದೆ. ಇದು ಹತ್ತು ಸಾವಿರ ರೂಪಾಯಿಗಳನ್ನು ಒಳಗೊಂಡಿರುತ್ತದೆ.

## ೭. ಸ. ಸ. ಮಾಳವಾಡ ಗ್ರಂಥಪುರಸ್ಕಾರ

ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದಲ್ಲಿ ಅಸ್ತಿತ್ವಕ್ಕೆ ಬಂದಿರುವ ಪ್ರೊ|| ಸ. ಸ. ಮಾಳವಾಡ ಗ್ರಂಥ ಪುರಸ್ಕಾರಕ್ಕೆ ಈ ಕೆಳಗಿನವು ಆಯ್ಕೆಯಾಗಿರುವು

ದಾಗಿ ಪತ್ರಿಕಾ ಪ್ರಕಟನೆಯಾಗಿದೆ—ಮೈಸೂರಿನ ಶ್ರೀ ಎಸ್. ಶಿವಾನಂದರ 'ವಿಮರ್ಶೆಯ ಸವಾಲುಗಳು' (1991), ಧಾರವಾಡದ ಶ್ರೀ ಗಿರಡ್ಡಿ ಗೋವಿಂದರಾಜ್ ಅವರ "ಸಾತತ್ಯ" (1992), ಮತ್ತು ವಿಜಾಪುರದ ಸಿದ್ಧೇಶ್ವರ ಸ್ವಾಮಿಯವರ "ಭಗವಚ್ಚಿಂತನ" (1993).

**೮. ಕಾವ್ಯಾನಂದ ಪುರಸ್ಕಾರ**

ಕನ್ನಡ ಸಾಹಿತ್ಯ ಸಂವರ್ಧಕ ಟ್ರಸ್ಟ್ ಎಂಬ ಸಂಸ್ಥೆ 'ಕಾವ್ಯಾನಂದ ಪುರಸ್ಕಾರ'ವನ್ನು ನೀಡುತ್ತ ಬಂದಿದೆ. 1993ನೆಯ ವರ್ಷದ ಈ ಪುರಸ್ಕಾರವನ್ನು ಕಲ್ಬುರ್ಗಿಯ ಡಾ|| ವೀರಣ್ಣದಂಡೆ ಅವರ ಕೃತಿಯಾಗಿರುವ "ಕನ್ನಡ ಜಾನಪದ ಪ್ರಜ್ಞೆ" ಎಂಬುದಕ್ಕೆ ಕೊಡಲಾಗಿದೆ. ಐದು ಸಾವಿರ ರೂಪಾಯಿಗಳನ್ನೊಳಗೊಂಡಿರುವ ಸಾಹಿತ್ಯ ಪುರಸ್ಕಾರವಿದು.

**೯. ತಿರುಮಲಾಂಬ ಪ್ರಶಸ್ತಿ**

ಬೆಂಗಳೂರಿನ ರಾಷ್ಟ್ರೀಯ ಶಿಕ್ಷಣ ಸಮಿತಿ ಟ್ರಸ್ಟ್ ನಡೆಸುತ್ತಿರುವ ಆರ್. ವಿ. ಮಹಿಳಾ ಕಾಲೇಜಿನ ಮಹಿಳಾ ಅಧ್ಯಯನ ಕೇಂದ್ರವಾದ 'ಶಾಶ್ವತೀ' ಸಂಸ್ಥೆಯು ನಂಜನಗೂಡು ತಿರುಮಲಾಂಬ ಪ್ರಶಸ್ತಿಯನ್ನು ರಾಷ್ಟ್ರೀಯಮಟ್ಟದಲ್ಲಿ ಮಹಿಳೆಯರ ಕೃತಿಗೆ ನೀಡುತ್ತದೆ. 1993-94ನೆಯ ವರ್ಷದ ಈ ಪ್ರಶಸ್ತಿಯನ್ನು ಮದರಾಸಿನ ರಾಜಂಕೃಷ್ಣನ್ ಅವರ "ಅವಳ್" ಎಂಬ ತಮಿಳು ಕಥಾ ಸಂಕಲನ ಪಡೆದಿದೆ.

**೧೦. ಅಭಿನಂದನೆ - ಸನ್ಮಾನ**

ಕನ್ನಡ ಸಂಸ್ಕೃತ ಉಭಯಭಾಷಾ ವಿದ್ವಾಂಸರೂ, ಲೇಖಕರೂ, ಶ್ರೇಷ್ಠ ಅನುವಾದಕರೂ ಆಗಿರುವ ವಿದ್ವಾನ್ ಶ್ರೀ ಎನ್. ರಂಗನಾಥಶರ್ಮಾ ಅವರಿಗೆ ಅಭಿನಂದನ ಸಮಿತಿಯ ಆಶ್ರಯದಲ್ಲಿ ಬೆಂಗಳೂರಿನ ಕುವೆಂಪು ಕಲಾಕ್ಷೇತ್ರದಲ್ಲಿ ದಿ|| 23-4-1994ರಂದು ಬೆಳಿಗ್ಗೆ 9 ಗಂಟೆಯಿಂದ ಸಂಜೆ 8ರ ವರೆಗೆ ಅಭಿನಂದನ ಸಮಾರಂಭ ಏರ್ಪಟ್ಟಿದ್ದಿತು. ಈ ಸಂದರ್ಭದಲ್ಲಿ ಉಪನ್ಯಾಸ, ಅಂತ್ಯಾಕ್ಷರಿ, ಸಂಗೀತಗೋಷ್ಠಿಗಳೊಂದಿಗೆ ಖ್ಯಾತ ವಿದ್ವಾಂಸರ ಸಂಶೋಧ ಲೇಖನಗಳನ್ನೊಳಗೊಂಡ "ರಂಗಾಭಿನಂದನ" ಎಂಬ ಕನ್ನಡ ಅಭಿನಂದನ ಗ್ರಂಥವನ್ನೂ ಅದೇ ಹೆಸರಿನ ಸಂಸ್ಕೃತದ ಅಭಿನಂದನ ಕೃತಿಯನ್ನೂ ಅವರಿಗೆ ಅರ್ಪಿಸಲಾಯಿತು. ಅದೇ ವೇಳೆ, ಶ್ರೀ ಎನ್. ರಂಗನಾಥಶರ್ಮರ ಕನ್ನಡ ಅನುವಾದ ಸಹಿತವಾದ, ಪ್ರಸ್ಥಾನತ್ರಯ ಭಾಷ್ಯಗಳಿಂದ ಆಯ್ದ ವಚನ ಸಂಗ್ರಹವಾಗಿರುವ "ಶ್ರೀ ಶಾಂಕರ ಸೂಕ್ತಿ ಮುಕ್ತಾವಲೀ" ಎಂಬ ಕೃತಿಯನ್ನು ಬಿಡುಗಡೆಮಾಡಲಾಯಿತು.

ಮೇಲಿನ ಎಲ್ಲಾ ವಿದ್ವಾಂಸರಿಗೂ ವಿಶೇಷ ಪ್ರಶಸ್ತಿ ಪುರಸ್ಕಾರ ಅಭಿನಂದನೆಗಳನ್ನು ಗಳಿಸಿದುದಕ್ಕಾಗಿ ಹರ್ಷಪಡುತ್ತ, ಬಿ. ಎಂ. ಶ್ರೀ. ಪ್ರತಿಷ್ಠಾನವು ಅಭಿಮಾನದಿಂದ ವಿಶೇಷ ಅಭಿನಂದನೆಗಳನ್ನು ಸಲ್ಲಿಸುತ್ತದೆ.

———

# ಶ್ರದ್ಧಾಂಜಲಿ

**ಜೋಳದರಾಶಿ ದೊಡ್ಡನಗೌಡ**

ನಾಡಿನ ಪ್ರಖ್ಯಾತ ಗಮಕಿಯೂ, ಪ್ರವಚನಕಾರರೂ, ನಾಟಕಕಾರರೂ ಆಗಿರುವ ಗಮಕ ಕಲಾನಿಧಿ ಡಾ|| ಜೋಳದರಾಶಿ ದೊಡ್ಡನಗೌಡರು ದಿ|| 10-5-1994ರಂದು ಕೈಲಾಸವಾಸಿಯಾದರು. ಅವರಿಗೆ 84 ವರ್ಷ ವಯಸ್ಸಾಗಿದ್ದಿತು. ರಂಗಭೂಮಿ ಮತ್ತು ಜಾನಪದ ಹಾಡುಗಾರಿಕೆಗಾಗಿ ಅವರಿಗೆ ಗುಲ್ಬರ್ಗ ವಿಶ್ವವಿದ್ಯಾಲಯದ ಡಾಕ್ಟರೇಟ್ ಪದವಿ ದೊರತಿದ್ದಿತು. ಕಾವ್ಯವಾಚನ ಪ್ರವಚನಗಳಿಗೆ ಅವರದು ಮೀಸಲು ಕಂಠ. ಅವರದು ಭಾವಪೂರ್ಣ ಕಾವ್ಯವಾಚನ. 1983ರಲ್ಲಿ ಅವರಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂದಿದೆ. "ನಂದೇ ನಾಸೋದಿದೆ" ಅವರ ಆತ್ಮಕಥೆ.

**ಎಂ. ಕೆ. ಇಂದಿರಾ**

ಮಹಿಳಾ ಲೇಖಕಿಯರಲ್ಲಿ ಮರೆಯಲಾಗದ ಹೆಸರು ಎಂ. ಕೆ. ಇಂದಿರಾ. ಅವರು 15-3-1994ರಂದು ವಿಧಿವಶರಾದರು. ಕಾದಂಬರಿ, ಸಣ್ಣಕತೆ, ಜೀವನ ಚರಿತ್ರೆ ಮುಂತಾದ ಪ್ರಕಾರಗಳಲ್ಲಿ ಸುಮಾರು 60ಕ್ಕೆ ಮಿಕ್ಕಿ ಕೃತಿರಚನೆ ಮಾಡಿರುವ ಅವರು ಕಾದಂಬರಿಕಾರ್ತಿಯರಾಗಿ ಜನಪ್ರಿಯರು. 'ತುಂಗಭದ್ರಾ' ಅವರು ತಮ್ಮ 43ರ ವಯಸ್ಸಿನಲ್ಲಿ ಬರೆದ ಪ್ರಥಮ ಕಾದಂಬರಿಲ್ಲಿ ಖ್ಯಾತ ಪತ್ರಕರ್ತ ಟಿ. ಎಸ್. ಆರ್. ಅವರ ಸಹೋದರ. ಅವರ 49 ಕಾದಂಬರಿಗಳಲ್ಲಿ 6 ಚಲನಚಿತ್ರಗಳಾಗಿವೆ. 1975ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿ ಅವರನ್ನು ಶ್ರೇಷ್ಠ ಲೇಖಕಿ ಎಂದು ಮನ್ನಿಸಿದೆ. 75 ವರ್ಷ ತುಂಬಿದ ಸಂದರ್ಭದಲ್ಲಿ, ಕರ್ನಾಟಕ ಲೇಖಕಿಯರ ಸಂಘ ಮತ್ತು ಕ. ಸಾ. ಪ. 1991ರಲ್ಲಿ ಅವರನ್ನು ಸನ್ಮಾನಿಸಿವೆ.

**ಪರ್ವತವಾಣಿ**

ಕನ್ನಡ ರಂಗಭೂಮಿಗೆ ವಿಶಿಷ್ಟ ಕಾಣಿಕೆ ಸಲ್ಲಿಸುತ್ತ 80ಕ್ಕೆ ಮಿಕ್ಕಿ ಕೃತಿ ರಚನೆ ಮಾಡಿರುವ ಪರಿಪಕ್ವ ಹಾಸ್ಯರಸಕ್ಕೆ ಹೆಸರಾದ ಪರ್ವತವಾಣಿ ಅವರು ದಿ|| 17-3-94 ರಂದು ಪರಲೋಕಯಾತ್ರೆಮಾಡಿದರು. ಅವರಿಗೆ ಆಗ 83 ವರ್ಷವಾಗಿದ್ದಿತು. ಆಧುನಿಕ ಕನ್ನಡ ನಾಟಕ ಮತ್ತು ಕೈಲಾಸಂ ನಾಟಕಯುಗದ ನಡುವಣ ಕೊಂಡಿಯಾಗಿದ್ದ ಪರ್ವತವಾಣಿಯವರು 83 ನಾಟಕಗಳನ್ನು ರಚಿಸಿದ್ದಾರೆ. ನಟರಾಗಿಯೂ ಜನಪ್ರಿಯ ರಾಗಿದ್ದರು. ನಾಟಕ ಅಕಾಡೆಮಿಯ ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸಿದ್ದಾರೆ. ಅವರಿಗೆ ಕೇಂದ್ರ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ (1980). ಕ.ಸಾ.ಪ. ಪ್ರಶಸ್ತಿ (1970) ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (1974) ಮತ್ತು ರಾಜ್ಯೋತ್ಸವ ಪ್ರಶಸ್ತಿ (1983) ಬಂದಿವೆ.

——

## ಈ ಸಂಚಿಕೆಯ ಲೇಖಕರು

1. **ಗರ್ಗೇಶ್ವರಿ ವೆಂಕಟಸುಬ್ಬಯ್ಯ**
   20, "ಗಣೇಶ ಧಾಮ" 2ನೇ ಕ್ರಾಸ್, 9ನೇ ಮೈನ್,
   ರಾಜಮಹಲ್ ವಿಲಾಸ ಬಡಾವಣೆ, ಬೆಂಗಳೂರು-80

2. **ಡಾ|| ಲಕ್ಷ್ಮೀನಾರಾಯಣ**
   ರೀಡರ್, ಕನ್ನಡ ವಿಭಾಗ, ಸರ್ಕಾರಿ ಮಹಿಳಾ ಕಾಲೇಜು
   ಕೋಲಾರ

3. **ಯು. ಎಸ್. ಶ್ರೀಧರ ಆರಾಧ್ಯ**
   ಕನ್ನಡ ಉಪನ್ಯಾಸಕರು, ಎನ್.ಡಿ.ಸಿ. ಪದವಿಪೂರ್ವ
   ಕಾಲೇಜು, ಮಾದಾಪುರ, ಕೊಡಗು ಜಿಲ್ಲೆ

4. **ಸನೋತನಹಳ್ಳಿ ರಾಮರಾಯ**
   ಕೋಟಿಮನೆ, 518, 4ನೇ ದೊಡ್ಡಬೀದಿ,
   ಗೋಕುಲ 3ನೇ ಹಂತ, ಮೈಸೂರು

5. **ಮಾ. ನಂ. ಶ್ರೀನಾಥ**
   7/7ಎ,'ಗೋಕುಲ' 3ನೇ ಹಂತ, 9ನೇ ತಿರುವು,
   ಚಾಮರಾಜಪೇಟೆ, ಬೆಂಗಳೂರು-18

6. **ದರ್ಭೆ ನಾರಾಯಣಭಟ್ಟ**
   1317-ಸಿ/ಡಿ ಬ್ಲಾಕ್, ಕುವೆಂಪು ನಗರ,
   ಮೈಸೂರು-23

7 **ಸದ್ಯೋಜಾತಮೂರ್ತಿ**
   ಮೈಸೂರು-19

8 **ವಿದ್ವಾನ್ ತಾಳ್ತಜೆ ಕೃಷ್ಣಭಟ್ಟ**
   ಪಂಜಳಮನೆ ಅಂಚೆ, ಉಪ್ಪಿನಂಗಡಿ-574 241
   ದಕ್ಷಿಣ ಕನ್ನಡ ಜಿಲ್ಲೆ

9. **ಡಾ|| ಯು. ರಾಮಭಟ್**
ಮುಖ್ಯಸ್ಥರು, ಕನ್ನಡ ವಿಭಾಗ, ಎಂ.ಜಿ.ಎಂ. ಕಾಲೇಜು
ಉಡುಪಿ–576 102

10. **ಬಿ. ಎಸ್. ಸಣ್ಣಯ್ಯ**
33/1, 8ನೇ ಅಡ್ಡರಸ್ತೆ, ಜಯಲಕ್ಷ್ಮೀಪುರಂ,
ಮೈಸೂರು

11. **ಎಸ್. ಜಗನ್ನಾಥ**
2925, ಸರಸ್ವತಿಪುರಂ, 1ನೇ ಮೈನ್, 5ನೇ ಕ್ರಾಸ್,
ಪಾರಸ್ ಟೆಕ್ಸ್‌ಟೈಲ್ಸ್ ಎದುರು, ಮೈಸೂರು–9

12. **ಕೆಳದಿ ಗುಂಡಾಜೋಯಿಸ್**
ನಿವೃತ್ತ ಗೌರವ ನಿರ್ದೇಶಕರು, ಕೆಳದಿ ಮ್ಯೂಸಿಯಂ,
ಕೆಳದಿ ಅಂಚೆ, ಸಾಗರ ತಾ||, ಶಿವಮೊಗ್ಗ ಜಿಲ್ಲೆ

13. **ಸಿ. ನಾಗಭೂಷಣ**
ಉಪನ್ಯಾಸಕರು, ಕನ್ನಡ ಅಧ್ಯಯನ ಸಂಸ್ಥೆ,
ಗು. ವಿ. ಸ್ನಾತಕೋತ್ತರ ಕೇಂದ್ರ, ಕೃಷ್ಣದೇವರಾಯನಗರ
ಸೊಂಡೂರು–583 119, ಬಳ್ಳಾರಿ ಜಿಲ್ಲೆ

14. **ಮುತ್ತರಾಜು**
3333, 40ಅಡಿ ಮುಖ್ಯರಸ್ತೆ, ಕುಮಾರಸ್ವಾಮಿ
ಬಡಾವಣೆ, ಎರಡನೇ ಘಟ್ಟ, ಬೆಂಗಳೂರು–78

15. **ಷಿ. ವಿ. ಜೋಶಿ**

16. **ಟಿ. ಕೇಶವಭಟ್**
764, 15ನೇ ಮೈನ್, 2ನೇ ಹಂತ,
ಬನಶಂಕರಿ, ಬೆಂಗಳೂರು–78

## ಪ್ರತಿಷ್ಠಾನದ ಗೌರವ ಸದಸ್ಯರು



## ವಿಮರ್ಶೆಗಾಗಿ ಗ್ರಂಥಗಳ ಎರಡು ಪ್ರತಿಗಳನ್ನು ಕಳಿಸಬೇಕು

ಸೃಜನಾತ್ಮಕ ಗ್ರಂಥಗಳನ್ನು ಸಾಧಾರಣವಾಗಿ ವಿಮರ್ಶೆ ಮಾಡಲಾಗುವುದಿಲ್ಲ. ಆದರೆ, ಕಳಿಸಿದರೆ ವೈಶಿಷ್ಟ್ಯವುಳ್ಳ ಅಂಥ ಗ್ರಂಥಗಳನ್ನು ಸಾಧ್ಯವಾದರೆ ಅವಲೋಕನ. ಮಾಡಿಸಲಾಗುವುದು.

## ವಿನಿಮಯ ಪತ್ರಿಕೆಗಳು

1) ಪ್ರಬುದ್ಧ ಕರ್ನಾಟಕ, ಮಾನವಿಕ ಕರ್ನಾಟಕ, ವಿಜ್ಞಾನ ಕರ್ನಾಟಕ, ಮೈಸೂರು 2) ಸಾಧನೆ, ಬೆಂಗಳೂರು 3) ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಬೆಂಗಳೂರು. 4) ಮಿಥಿಕ್ ಸೊಸೈಟಿ ಜರ್ನಲ್, ಬೆಂಗಳೂರು. 5) ಬಸವ ಪಥ, ಬೆಂಗಳೂರು. 6) ಶಂಕರಭಾಸ್ಕರ, ಬೆಂಗಳೂರು. 7) ಧರ್ಮಪ್ರಭ, ಬೆಂಗಳೂರು. 8) ಜಾನಪದ ಜಗತ್ತು, ಬೆಂಗಳೂರು. 9) ಅನ್ವೇಷಣೆ, ಬೆಂಗಳೂರು. 10) ಅಪರಂಜಿ, ಬೆಂಗಳೂರು 11) ಕರ್ನಾಟಕ ಭಾರತಿ, ಧಾರವಾಡ. 12) ಸುಗುಣಮಾಲಾ, ಉಡುಪಿ. 13) ಸತ್ಯಶುದ್ಧ ಕಾಯಕ, ಸಿರಿಗೆರೆ. 14) ತರಳಬಾಳು, ಸಿರಿಗೆರೆ. 15) ಅಭಿಮತ, ದೆಹಲಿ.

## ಕರ್ನಾಟಕ ಲೋಚನ ಚಂದಾ ವಿವರ

| | | |
|---|---|---|
| ವಾರ್ಷಿಕ ಚಂದಾ | : | ವ್ಯಕ್ತಿಗಳಿಗೆ ರೂ. 15-00 |
| | | ಗ್ರಂಥಾಲಯ, ಸಂಘ ಸಂಸ್ಥೆಗಳಿಗೆ ರೂ. 25-00 |
| ಆಜೀವ | : | ರೂ. 150-00 |
| | | ಪ್ರತಿಷ್ಠಾನದ ಸದಸ್ಯರಿಗೆ ಲೋಚನ ಉಚಿತ. |
| ಪ್ರತಿಷ್ಠಾನದ ಸದಸ್ಯತ್ವ | : | ವಾರ್ಷಿಕ ರೂ. 25-00 ಆಜೀವ ರೂ. 250-00 |
| | | ಬಿಡಿ ಪ್ರತಿ ರೂ. 10-00 |

KARNATAKA LOCHANA Half Yearly Journal, Published by B. M. Sri. Smaraka Prathishthana, 54, M. V. Seetharamaiah Road, Masthi Nagara, (Gavipuram Extension), Bangalore-19. Printed by : Prabhu Mudrana, Shakambari Nagar, Sarakki, Bangalore-560 078 Phone : 640976

# ಪ್ರತಿಷ್ಠಾನದ ಈಚಿನ ಪ್ರಕಟಣೆಗಳು

| | | | |
|---|---|---|---|
| 1. | ಸಂಗಮರ ಕಾಲದ ವಿಜಯನಗರ | | 75–00 |
| 2. | ಕುಮಾರವ್ಯಾಸ ಭಾರತ ಸಂಗ್ರಹ | ಸಾದಾ ಪ್ರತಿ | 40–00 |
| | | ಉತ್ತಮ ಪ್ರತಿ | 75–00 |
| 3. | ಕಾವ್ಯ-ಇತಿಹಾಸ (ದತ್ತಿ ಉಪನ್ಯಾಸಗಳು) | | 10–00 |
| 4. | ಶಂಬಾ ಕೃತಿ ಸಮೀಕ್ಷೆ | | 35–00 |
| 5. | ಎಂ. ವಿ. ಸೀ. ಸಂಸ್ಮರಣೆ | | 25–00 |
| 6. | ವೈಚಾರಿಕ ಜಾಗೃತಿ | | 15–00 |
| 7. | ಹಸ್ತಪ್ರತಿಶಾಸ್ತ್ರ ಪರಿಚಯ | | 15–00 |
| 8. | ಸಂವಿಧಾನ ಮತ್ತು ಕಾನೂನು | | 20–00 |
| 9. | ಮಾಸ್ತಿ ಕಥಾ ಸಮೀಕ್ಷೆ | | 20–00 |

## ಸಿದ್ಧತೆಯಲ್ಲಿ

1. ಕದಂಬ (ಎಂ.ವಿ.ಸೀ. ಸಮಗ್ರ ಸಾಹಿತ್ಯ–1, ಸಮಗ್ರ ಸಂಶೋಧನಾ ಲೇಖನಗಳು)
2. ಕವಿರಾಜಮಾರ್ಗ (ಎಂ.ವಿ.ಸೀ. ಸಮಗ್ರ ಸಾಹಿತ್ಯ–2)
3. ತೌಲನಿಕ ಸಾಹಿತ್ಯ
4. ಸಾಹಿತ್ಯ ಮತ್ತು ಮನಶ್ಶಾಸ್ತ್ರ
5. ಶಾಸನ ಪದ್ಯ
6. ದತ್ತಿ ಉಪನ್ಯಾಸಗಳು
7. ತಿರುಕ್ಕುರಳ್ (ಕನ್ನಡಾನುವಾದ)